# 'ಸಿದ್ಧಗಂಗಾ' [illegible]

## ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

525 ಶ್ರೀ ಎಸ್. ಹೆಚ್. ಪುಟ್ಟಗಂಗಯ್ಯ.
ಜಯನಗರ, ಬೆಂಗಳೂರು – 11

526 ಶ್ರೀ ಟಿ. ಬಸವರಾಜು
ಜಯನಗರ, ಬೆಂಗಳೂರು – 11

527 ಶ್ರೀ ಬಿ. ಪಿ. ಶಿವಕುಮಾರ್ S/o
ಬಿ. ಎಸ್. ಪುಟ್ಟಣಯ್ಯ, ಮಂಡ್ಯ.

528 ಶ್ರೀ ಕೆ. ಪಿ. ನಾಗರಾಜು ಅಕೌಂಟ್ಸ್ ಆಫೀಸರ್
S/o ಕೆ. ಎಸ್. ಪರಮೇಶ್ವರಯ್ಯ
ವಿಶ್ವೇಶ್ವರಯ್ಯ ನಾಲಾ, ಮಂಡ್ಯ.

529 ಶ್ರೀ ಮಹದೇವಪ್ಪ, ದೊಡ್ಡ ಭೂವಹಳ್ಳಿ.
ಮಂಡ್ಯ ಜಿಲ್ಲೆ.

530 ಶ್ರೀ ಬಿ. ಶಿವಕುಮಾರ್. ಅಸಿಸ್ಟೆಂಟ್
ಇಂಜಿನಿಯರ್, ಮೈಸೂರು - 4

531 ಶ್ರೀ ಗುರುಸ್ವಾಮಿ, ಮರ್ಚೆಂಟ್
ಚಾಮರಾಜನಗರ, ಮೈಸೂರು ಜಿಲ್ಲೆ.

532 ಶ್ರೀ ಎಸ್. ರುದ್ರಪ್ರಸಾದ, S/o
ಎಸ್. ಕೆ. ಶಿವರುದ್ರಯ್ಯ, ಮರ್ಚೆಂಟ್
ವರ್ತೂರು. ಬೆಂಗಳೂರು ಜಿಲ್ಲೆ.

533 ಶ್ರೀ ಎಸ್. ಶಿವಕುಮಾರ್. S/o
ಶ್ರೀ ಸಿದ್ಧಲಿಂಗಯ್ಯ, ದೊಡ್ಡಬೆಳವಂಗಲ,
ಬೆಂಗಳೂರು ಜಿಲ್ಲೆ.

531 ಶ್ರೀ. ಎಂ ಮುನಿಯಪ್ಪ. ಸ್ಟೀಲ್ ವೆಸಲ್‌ಶಾಪ್
ವಿಜಯಪುರ, ಬೆಂಗಳೂರು ಜಿಲ್ಲೆ.

535 ಶ್ರೀ ಬಿ. ಚನ್ನರಸಪ್ಪ. ಮರ್ಚೆಂಟ್
ವಿಜಯಪುರ. ಬೆಂಗಳೂರು ಜಿಲ್ಲೆ.

536 ಶ್ರೀ ಬಸವರಾಜಯ್ಯ S/o ಶ್ರೀ ಚಂದ್ರಶೇಖರಯ್ಯ
ಅಣ್ಣೇಶ್ವರ. ದೇವನಹಳ್ಳಿ, ಬೆಂಗಳೂರು ಜಿಲ್ಲೆ.

537 ಶ್ರೀ ಎಂ. ಎನ್. ನಾರಾಯಣಪ್ಪ.
ದೇವನಹಳ್ಳಿ. ಬೆಂಗಳೂರು ಜಿಲ್ಲೆ.

538 ಶ್ರೀ ಎಂ. ಸಿ. ಬಸವರಾಜು
ಶ್ರೀ ನಗರೇಶ್ವರ ಸ್ಟೋರ್ಸ್ ದೇವನಹಳ್ಳಿ,
ಬೆಂಗಳೂರು ಜಿಲ್ಲೆ.

539 ಶ್ರೀ ಎ. ವಿ. ನಾಗರಾಜ್ ಆವತಿ
S/o ವೆಂಕಟರಾಮಪ್ಪ, ಗೊರಿಬಾಗಿಲು
ದೇವನಹಳ್ಳಿ, ತಾ|| ಬೆಂಗಳೂರು ಜಿಲ್ಲೆ.

540 ಶ್ರಿ ಮುನಿವೀರಪ್ಪ. ಜೊನ್ನಹಳ್ಳಿ,
ಹೊಸಕೋಟೆ ತಾ|| ಬೆಂಗಳೂರು ಜಿಲ್ಲೆ.

541 ಶ್ರೀ ಎ. ಚನ್ನಪ್ಪ. ಮರ್ಚೆಂಟ್. ಆವತಿ,
ದೇವನಹಳ್ಳಿ |ತಾ ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ)



# ಶ್ರೀವಾಣಿ

ವಿಷಯ ವಾಸನೆಗಳಿಂದ ದೂರವಾಗಿ ಪರಮಾತ್ಮಕ ವಿಷಯವಾದ ಚಿಂತನೆಯಲ್ಲಿ ಪ್ರವಹಿಸುವುದೇ ವ್ಯವಸಾಯಾತ್ಮಕವಾದ ಬುದ್ಧಿಯ ಲಕ್ಷಣ.

ವ್ಯವಸಾಯಾಕಾತ್ಮಿಕ ಬುದ್ಧಿಃ ಏಕೇಹಕುರುನಂದನ।
ಬಹುಶಾಖಾಹ್ಯನಂತಾಶ್ಚ ಬುದ್ಧಯೋ ವ್ಯವಸಾಯಿನಾಂ॥

ವ್ಯವಸಾಯಾತ್ಮಕವಲ್ಲದ ಎಂದರೆ ಸುಸಂಸ್ಕೃತವಲ್ಲದ ಮನಸ್ಸು ಬಹುಮುಖವಾಗಿ ಹರಿಯುವುದು ವ್ಯವಸಾಯಾತ್ಮಿಕ ಬುದ್ಧಿಯು ಅರ್ಥಾತ್ ಸುಸಂಸ್ಕೃತ ಮನಸ್ಸು ಏಕಪಥ ಪ್ರವಾಹಿನಿಯಾಗಿರುವುದು. ಅಭ್ಯಾಸಬಲದಿಂದ ಪರಿಪೂರ್ಣವಾಗಿ ಹದಗೊಳಿಸಲ್ಪಟ್ಟ ಮನಸ್ಸುಳ್ಳವನೆ ಸುಸಂಸ್ಕೃತ. ಅಸಂಸ್ಕೃತವಾದ ಮನಸ್ಸೇ ಚಿಂತಾರತ್ನ. ಅಸಂಸ್ಕೃತವಾದ ಮನಸ್ಸೇ ಘಟಸರ್ಪ. ಭಾವ ಬಲಿತು ಮನಸ್ಸು ಪವಿತ್ರವಾದಾಗ ಸುಸಂಸ್ಕೃತನ ಮಾತು, ಕೃತಿಗಳೆಲ್ಲವೂ ತೇಜೋಮಯವೂ ಪರಿಶದ್ಧವೂ ಆಗುತ್ತವೆ. ಆಗ ಅವನ ಮಾತು ಮಾಟಗಳು ವಿಶ್ವಪ್ರೇಮವನ್ನು ಹೊರಸೂಸುತ್ತಾ ಜಗದ್ಧಿತಾರ್ಥವಾಗುತ್ತವೆ. ಈತನೇ ನಿಜವಾದ ಸುಸಂಸ್ಕೃತ. ಇದುವೇ ಪವಿತ್ರವಾದ ಸುಸಂಸ್ಕೃತಿ. "Culture is what produces sweetness of temper, sanity of mind and strenth of spirit."

ಇಂಥ ಸುಸಂಸ್ಕೃತರೇ ವಿಶ್ವಶಾಂತಿಯನ್ನು ಸಾಧಿಸಬಲ್ಲರು. The greatest conceivable worker for peace is he who has himself attained perfection, realised God and eternal absolute peace" ಹೀಗೆ ಪರಿಪೂರ್ಣತೆಯನ್ನು ಹೊಂದಿ, ದೇವ ಸಾಕ್ಷಾತ್ಕಾರವನ್ನು ಪಡೆದು ಪರಾಶಾಂತಿ ಪ್ರತೀಕವಾಗಿ ಬ್ರಹ್ಮಾನಂದದಲ್ಲಿ ವಿಹರಿಸುತ್ತಿರುವ ಜೀವನ್ಮುಕ್ತರೇ ಶಾಂತಿಸ್ಥಾಪನೆಗೆ ದಿವ್ಯ ಅಧಿಕಾರಿಗಳು.

# 'ಸಿದ್ಧಗಂಗಾ'

ಡಿಸೆಂಬರ್, ೧೯೭೮

ಸಂಪುಟ–೧೪ ಸಂಚಿಕೆ–೧೨

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ|| ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ಅಜೀವ ಸದಸ್ಯತ್ವ: 151-00 ರೂ

ವಾರ್ಷಿಕ ಚಂದಾ: 10–00 ರೂ

## ಈ ಸಂಚಿಕೆಯಲ್ಲಿ



ಮುಖಪುಟ

ಸಕಲ ಜೀವಾಳಿಯಲಿ ಲೇಸ
ಕಾಣುವ ಕಾರುಣ್ಯದೃಷ್ಟಿ.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572131 ತುಮಕೂರು ಜಿಲ್ಲೆ.

## ಸ್ಮರಣೀಯ ಸೇವೆಗಾಗಿ ಕೃತಜ್ಞತೆಗಳು

ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಅನುಗ್ರಹದಿಂದ 'ಸಿದ್ಧಗಂಗಾ' ಮಾಸಪತ್ರಿಕೆ ಹದಿನೈದನೆಯ ವರ್ಷಕ್ಕೆ ಅಡಿಇಡುತ್ತಿರುವ ಈ ಶುಭಸಂದರ್ಭದಲ್ಲಿ ನಮ್ಮ ಮಾನ್ಯ ಓದುಗರಿಗೆ ಅನಂತ ವಂದನೆಗಳು.

## ಅತ್ಯಧಿಕ ಸಂಖ್ಯೆಯಲ್ಲಿ ಪ್ರಸಾರ

'ಸಿದ್ಧಗಂಗಾ' ಮಾಸ ಪತ್ರಿಕೆ ಕರ್ನಾಟಕರಾಜ್ಯದ ಎಲ್ಲಾ ಭಾಗಗಳಲ್ಲಿ ಸಂಚರಿಸಿ ಓದುಗರ ಕೈ ಸೇರುತ್ತಿದೆ. ಯಾವವಿಧವಾದ ಪ್ರತಿಫಲವಿಲ್ಲದೆ ಶ್ರೀ ಕ್ಷೇತ್ರದಮೇಲೆ ಪ್ರೀತಿಗೌರವ ಅಭಿಮಾನವಿಟ್ಟು ಸಮಾಜ ಬಂಧುಗಳು ಮತ್ತು ಹಿತೈಷಿಗಳು ಪ್ರಸಾರ ಕಾರ್ಯದಲ್ಲಿ ನೆರವಾಗುತ್ತಿದ್ದಾರೆ.

ಅತ್ಯಧಿಕ ಪ್ರಸಾರಕ್ಕೆ ಆಯಾಪ್ರದೇಶಗಳಲ್ಲಿ ವಿಶೇಷವಾಗಿ ಶ್ರಮಿಸಿ ಹೆಚ್ಚುಮಂದಿ ಓದುಗರನ್ನು ಮತ್ತು ಆಜೀವ ಸದಸ್ಯರುಗಳನ್ನು ಮಾಡಿದ ಈ ಆತ್ಮೀಯ ಬಂಧುಗಳಿಗೆ ಶ್ರೀ ಕ್ಷೇತ್ರದಪರವಾಗಿ ಕೃತಜ್ಞತೆಗಳು. ಯಥಾರೀತಿ ತಮ್ಮ ಸಹಕಾರ ಮತ್ತು ಅಭಿಮಾನವನ್ನು ಮುಂದುವರಿಸುವರೆಂಬ ವಿಶ್ವಾಸ ನಮಗಿದೆ.

ಪ್ರಕಾಶಕರು, ಸಿದ್ಧಗಂಗಾ ಮಾಸಪತ್ರಿಕೆ

ಶ್ರೀ ಯುತರುಗಳಾದ:

1. ಕೆ. ಎಸ್. ಬಸವಲಿಂಗಪ್ಪ, ಜೆ. ಎಲ್. ಪುರಂ, ಮೈಸೂರು.
2. ಸಿ. ಬಿ. ಶಂಕರಪ್ಪ, ಹೆಡ್‌ಮಾಸ್ಟರ್, ದೇವನಹಳ್ಳಿ, ಬೆಂಗಳೂರು ಜಿಲ್ಲೆ.
3. ಎಂ. ಪಿ. ಸದಾಶಿವಯ್ಯ, ಅಸಿಸೆಂಟ್. ಎಗ್ಸಿಕ್ಯುಟಿವ್. ಇಂಜಿನಿಯರ್, ಕುಡಚಿ, ಬೆಳಗಾಂ ಜಿಲ್ಲೆ.
4. ಡಾ|| ಕೆ. ಎಂ. ಹಾಲಪ್ಪ, ಗಿರಿಜಾಹಾಸ್ಪಿಲ್, ಅರಸೀಕೆರೆ.
5. ಎಸ್. ಶಿವಾನಂದ ಮೂರ್ತಿ, ತಹಸೀಲ್ದಾರ್, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ.
6. ಟಿ. ಸಿ. ಪ್ರಭುದೇವ, ಸರ್ವೆಯರ್, ಸಿಟಿ ಸರ್ವೆ ಆಫೀಸ್, ಮೈಸೂರು.
7. ಬಿ. ಎಸ್. ಸಾಂಬಮೂರ್ತಿ, ಎಗ್ಸಿಕ್ಯುಟೀವ್ ಇಂಜಿನಿಯರ್, ಹೊಳೆನರಸೀಪುರ, ಹಾಸನ ಜಿಲ್ಲೆ,
8. ಜಿ. ಉರಲಿಂಗಪ್ಪ, ಅಡ್ವೊಕೇಟ್, ಅರಸೀಕೆರೆ.
9. ಎಸ್. ಜಿ. ಅಡವೀಶಯ್ಯ, ಸರ್ವೆಯರ್, ಚಿಕ್ಕಮಗಳೂರು.
10. ಎಂ. ಜಿ. ನಾಗರಾಜಪ್ಪ, ಅಸಿಸ್ಟೆಂಟ್ ಇಂಜಿನಿಯರ್ ಬಿ. ಇ. ಎಂ. ಎಲ್. ಕೆ. ಜಿ. ಎಫ್.
11. ಆನಂದಪ್ಪ, ಡಿ. ಎಂ ಇ., ಬಿ. ಇ: ಎಂ. ಎಲ್, ಕೆ. ಜಿ. ಎಫ್.
12. ಬಸವರಾಜಪ್ಪ. ಲಕ್ಷ್ಮೀಪುರ, ಬೆಂಗಳೂರು ಜಿಲ್ಲೆ.
13. ಎಸ್. ನಾಗೇಶಪ್ಪ, ಪ್ರಿನ್ಸಿಪಾಲ್ ಗೌ|| ಪಾಲಿಟೆಕ್ನಿಕ್, ಬಿಜಾಪುರ.
14. ಡಿ. ಬಿ. ಮೃತ್ಯುಂಜಯಪ್ಪ, ದೊಡ್ಡಸಾರಂಗಿ, ತುಮಕೂರು ತಾ||.
15. ಸಿದ್ದಲಿಂಗಪ್ಪ, ಮರ್ಚೆಂಟ್, ಮೈಸೂರು ಜಿಲ್ಲೆ.
16. ಹೆಚ್. ಕೆ. ಚನ್ನಪ್ಪ ಹಗಿನವಾಳು, ಮೈಸೂರು ಜಿಲ್ಲೆ.
17. ಬಿ. ವಿರುಪಾಕ್ಷಯ್ಯ [L. I. C.] ಜಯನಗರ, ಬೆಂಗಳೂರು.. 11
18. ಶ್ರೀ ಜಯಚಂದ್ರಶೇಖರ ಸ್ವಾಮಿಗಳು, ಬಸವ ಮಂದಿರ, ದೊಡ್ಡಕುರುಬರ ಹಳ್ಳಿ, ಚಿಕ್ಕಮಗಳೂರು ಜಿಲ್ಲೆ.
19. ಭೂಕಳ್ಳಿ ಬಸವರಾಜು ಅಸಿಸ್ಟೆಂಟ್ ಇಂಜಿನಿಯರ್ ಕಬಿನಿ ನಾಲಾ, ಟಿ. ಎನ್. ಪುರ, ಮೈಸೂರು ಜಿಲ್ಲೆ.
20. ಬಿ. ಶಿವಮಲ್ಲಪ್ಪ, ಸೀಹಳ್ಳಿ ಟಿ. ಎನ್. ಪುರ, ಮೈಸೂರು ಜಿಲ್ಲೆ,

21. ಎಂ. ಡಿ. ನಂಜುಂಡಪ್ಪ, ಮರ್ಚೆಂಟ್ ದೇವನಹಳ್ಳಿ, ಬೆಂಗಳೂರು ಜಿಲ್ಲೆ,
22. ಎಸ್. ರುದ್ರಪ್ರಸಾದ್, S/o ಕೆ. ಹೆಚ್. ಶಿವರುದ್ರಯ್ಯ, ವರ್ತೂರು, ಬೆಂಗಳೂರು ಜಿಲ್ಲೆ,
23. ಟಿ. ಗುರುದೇವಪ್ಪ, ಹಿರೆಬೆಳಗುಲಿ. ಹೆಚ್. ಎನ್. ಪುರ, ತಾ|| ಹಾಸನ ಜಿಲ್ಲೆ.
24. ಡಿ. ಸಿ. ರಾಜಣ್ಣ, ಅಸಿಸ್ಟೆಂಟ್ ಎಗ್ಸಿಕ್ಯುಟೀವ್, ಇಂಜಿನಿಯರ್ ಹೆಚ್. ಸಿ. ಡಿವಿಜನ್, ಹೆಬ್ಬಲೆ, ಉ. ಕ.
25. ಟಿ. ಬಿ. ವಿರೂಪಾಕ್ಷಯ್ಯ, ರಾಜಾಜಿ ನಗರ, ಬೆಂಗಳೂರು-- 10,
26. ಎಂ. ಬಸವಯ್ಯ, ಹೆಡ್‌ಮಾಸ್ಟರ್, ಗುಬ್ಬಿ, ತುಮಕೂರು ಜಿಲ್ಲೆ.
27. ಬಿ. ಎಸ್. ಪುಟ್ಟಸ್ವಾಮಿ, ಅಸಿಸ್ಟೆಂಟ್, ಇಂಜನಿಯರ್, ಧಾರವಾಡ.
28. ಶಿವಕುಮಾರ್, S/o ಸಿದ್ದಲಿಂಗಪ್ಪ, ದೊಡ್ಡಬೆಳವಂಗಲ, ಬೆಂಗಳೂರು ಜಿಲ್ಲೆ.
29. ಹೆಚ್. ಡಿ. ರೇಣುಕ ಕುಮಾರ್, ಚಾಮರಾಜ ಪೇಟೆ, ಬೆಂಗಳೂರು-18
30. ಚಿಕ್ಕ ಬಸಪ್ಪ, ತಗಡೂರು, ಮೈಸೂರು ಜಿಲ್ಲೆ.
31. ವೈ.ಎಂ ಮಲ್ಲೇಶಯ್ಯ, ಎಕ್ಸೈಜ್- ಆಫೀಸ್, ಮೈಸೂರು.
32. ಆರ್. ಚಂದ್ರಶೇಖರಯ್ಯ ಮಾದಗೊಂಡ ಪಲ್ಲಿ, ತಮಿಳುನಾಡು.
33. ಈರಯ್ಯ, ಅನುಮಾಳು, ಮಂಡ್ಯ ಜಿಲ್ಲೆ.
34. ಹೆಚ್. ಎಸ್. ನಂಜುಂಡಯ್ಯ, ಹುಲಿಹಳ್ಳಿ, ತಿಪಟೂರು ತಾ||.
35. ಕೆ. ನಾಗಣ್ಣ, ಭೂಸಾರ ಸಂರಕ್ಷಣಾ ಕಾರ್ಯಾಲಯ, ಪಾವಗಡ, ತುಮಕೂರು ಜಿಲ್ಲೆ
36. ಬಿ. ಪುಟ್ಟಣ್ಣ, ಶಿಕ್ಷಕ ಸಣ್ಣೇನಹಳ್ಳಿ, ತಿಪಟೂರು ತಾ||
37. ಡಾ|| ಸಿದ್ದಲಿಂಗಯ್ಯ, ಕೂಡಲ ಸಂಗಮ, ಬಿಜಾಪುರ ಜಿಲ್ಲೆ.
38. ಜಿ. ಎಸ್. ಹಿರೇಮಠ್. ಹುಬ್ಬಳ್ಳಿ.
39. ಬಿ. ಎಸ್. ಗುರುಸಿದ್ದಯ್ಯ, ಶಿಕ್ಷಕ, ತಳಲತೊರೆ, ಅರಸೀಕೆರೆ ತಾ||
40. ಬಿ. ಸೋಮಶೇಖರ್, ಕೆ. ಇ. ಬಿ. ಶಿಂಷಾಪುರ, ಮಂಡ್ಯ ಜಿಲ್ಲೆ.
41. ಹೆಚ್. ಸದಾಶಿವಯ್ಯ, ಸೋಮೇಶ್ವರ ಪುರಂ, ತುಮಕೂರು.
42. ಹೆಚ್. ವಿ. ತಿಮ್ಮಪ್ಪ, ಗಾ|| ಬಾಲಕಿಯರ ಪ್ರೌಢಶಾಲೆ, ಅರಸೀಕೆರೆ.
43. H. C. ನಂಜುಂಡಯ್ಯ, ಕಾಂಪೌಂಡರ್, ಬಂಡಿಗುಡ್ಡ, ಭದ್ರಾವತಿ.
44. ಬಿ. ಎಂ. ಈಶ್ವರಪ್ಪ, ಶಿಕ್ಷಕ, ತುದಿಯಾಲ, ಮೂಡಿಗೆರೆ ತಾ|| ಚಿಕ್ಕಮಗಳೂರು, ಜಿಲ್ಲೆ,
45. ಬಿ. ಕೆಂಬಣ್ಣ, ಬಿಳಿಗೆರೆ, ತಿಪಟೂರು ತಾ||
46. H. C. ಬಸವರಾಜು, ದಾಸರ ಹಳ್ಳಿ, ಬೆಂಗಳೂರು. 40
47. ಎಂ. ಎನ್. ಶಿವಣ್ಣ, ಶಿಕ್ಷಕ ನ್ಯಾಕೇನ ಹಳ್ಳಿ, ತಿಪಟೂರು ತಾ||
48. ಶ್ರೀ ವಿರುಪಾಕ್ಷ ಸ್ವಾಮಿಗಳು, ಬೈರ ಮಂಗಲ ಮಠ, ರಾಮನಗರ ತಾ|| ಬೆಂಗಳೂರು, ಜಿಲ್ಲೆ.
49. ಎಸ್. ರಾಜಶೇಖರಯ್ಯ, [ F. A. ] ಹತ್ತಿಮತ್ತೂರು. ಸವಣೂರು ತಾ|| ಧಾರವಾಡ ಜಿಲ್ಲೆ.
50. ಕೆ. ಬಿ. ವೀರಣ್ಣ, ಮ್ಯಾನೇಜರ್, N.E.S. ಆಫೀಸ್, ತುರುವೇಕೆರೆ, ತುಮಕೂರು ಜಿಲ್ಲೆ.
51. ಸಿಬಯ್ಯ, ಹೆಡ್ ಮಾಸ್ಟರ್, ಸಿದ್ಧಗಂಗಾ ರೂರಲ್ ಹೈಸ್ಕೂಲ್, ದೊಡ್ಡ ಗುಣಿ, ಗುಬ್ಬಿ ತಾ|| ತುಮಕೂರು ಜಿಲ್ಲೆ.
52. ಹೆಚ್. ವಿ. ಹನುಮಂತರಾಯಪ್ಪ, ಜಾಲಹಳ್ಳಿ, ಬೆಂಗಳೂರು. -- 13
53. ಎಸ್. ಎಸ್. ವೀರಣ್ಣಪ್ಪ, ಬಿ. ಡಿ. ಒ. ಆಫೀಸ್, ದೇವದುರ್ಗ ರಾಯಚೂರು ಜಿಲ್ಲೆ.
54. ಕೆ. ಆರ್. ವಿರೂಪಾಕ್ಷಯ್ಯ ಶಿಕ್ಷಕ, ಕೆ. ಜಿ. ನಗರ, ಬೆಂಗಳೂರು. -- 19.
55. ಎಸ್. ಎಂ. ನಾಗರಾಜಪ್ಪ, ಇ. ಬಿ. ಚಿಕ್ಕಮಗಳೂರು.
56. ಭೀಮಾಶಂಕರ್ ಮಂಗಳೂರು, ಜೇವರ್ಗಿ ತಾ|| ಗುಲ್ಬರ್ಗ ಜಿಲ್ಲೆ.
57. ಬಸವರಾಜಪ್ಪ, ಯಾದಗಿರಿ, ಗುಲ್ಬರ್ಗ ಜಿಲ್ಲೆ.
58. ಹೆಚ್. ಗವಿರಂಗಪ್ಪ ಸರ್ವೋದಯ ಸೇವಕ, ಅರಳೀಕೆರೆ, ತುಮಕೂರು ಜಿಲ್ಲೆ.
59. ಕೆ. ವಿ. ಶರ್ಮಶಾಸ್ತ್ರಿಗಳು, ಚಳ್ಳೆಕುಡ್ಲೂರು. ಶಿರಗುಪ್ಪ ತಾ|| ತುಮಕೂರು ಜಿಲ್ಲೆ.
60. ಶ್ರೀ ಬಿ.ಎಂ ವೀರಪ್ಪ,ಶಿಕ್ಷಕರು, ಬಸವೇಶ್ವರ ಹೈಸ್ಕೂಲ್, ಹಲಸಹಳ್ಳಿ ಗವಿಮಠ, ಮಂಡ್ಯ-ಜಿಲ್ಲೆ.
61. ಶ್ರೀ ಬಿ.ಪಿ. ಬಸವಯ್ಯ, ಬೆಲಾಲಾನ್, ಧರ್ಮಪುರಿ ಜಿಲ್ಲೆ, ತಮಿಳುನಾಡು.
62. ಶ್ರೀಲೋಕೇಶ್, ಮೈಸೂರ್‌ಬ್ಯಾಂಕ್, ಶಿರಾ, ತುಮಕೂರು ಜಿಲ್ಲೆ.

ಹೆಚ್. ಆರ್. ಮುದ್ದಗಂಗಯ್ಯ, ಸಿಂಡಿಕೇಟ್ ಬ್ಯಾಂಕ್, ಕಾಡುಗೊಂಡನಹಳ್ಳಿ, ಬೆಂಗಳೂರು-45
63. ಹೆಚ್. ಆರ್. ಮುದ್ದಗಂಗಯ್ಯ, ಸಿಂಡಿಕೇಟ್ ಬ್ಯಾಂಕ್, ಕಾಡುಗೊಂಡನಹಳ್ಳಿ, ಬೆಂಗಳೂರು-45
64. ಎಂ. ಬಸವರಾಜಪ್ಪ, ಶಿವಫೈನಾನ್ಸ್ ಕಾರ್ಪೊರೇಷನ್, ನ್ಯಾಮತಿ, ಶಿವಮೊಗ್ಗ-ಜಿಲ್ಲೆ.
65. ಎಸ್.ಹೆಚ್. ರೇವಣಸಿದ್ದಪ್ಪ. ಗಂಗಾ ಫಾರಂ, ಬಾಗಲೂರು, ಬೆಂಗಳೂರು ಜಿಲ್ಲೆ.
66. ವಿ. ಜಗದೀಶ್, ಸಿ. ಮಂಗಲ, ಕೋಲಾರ ಜಿಲ್ಲೆ
67. ಎನ್. ರಂಗೇಗೌಡ, ಶಿಕ್ಷಕ ಹೋನ್ನೆಬಾಗಿ' ತುಮಕೂರು ಜಿಲ್ಲೆ
68. ನಾಡಿಗ ರಾಜಶೇಖರ್ S/o ಎಲ್ ಬಿ. ನಾಡಿಗ, ಅಡ್ವೋಕೇಟ್, ದಾವಣಗೆರೆ.
69. ಟಿ. ಎಂ. ಬಸವರಾಜು ಕಬಿನಿ ಕಾಲೋನಿ, ಮೈಸೂರು ಜಿಲ್ಲೆ
70. ಜಿ. ಎಸ್. ಬಿ. ರಾಮಪ್ಪ ಜಯಸುವರ್ಣಪುರ, ಚಿತ್ರದುರ್ಗ ಜಿಲ್ಲೆ.
71. ಎಸ್, ನಂಜುಂಡಪ್ಪ ಕವನವಳ, ತುಮುಕೂರು ಜಿಲ್ಲೆ
72. ಟಿ. ಹೆಚ್. ಶಿವಪ್ಪ, ಶಿಕ್ಷಕ ಅಮ್ಮನಕೆರೆ, ಶಿವಮೊಗ್ಗ ಜಿಲ್ಲೆ
73. ರೇವಣಸಿದ್ಧಯ್ಯ ಕೆ. ಎಸ್ ಆರ್. ಟಿ. ಸಿ. ತುಮುಕೂರು ಡಿಪೋ
74. ಬಿ. ರಾಜಶೇಖರಪ್ಪ. ಬಿಸಲರೆ, ಚಿಕ್ಕಮಂಗಳೂರು ಜಿಲ್ಲೆ.
75. ಎಂ. ಟಿ. ಮಂಚಯ್ಯ, ಆರ್. ಟಿ. ಒ. ಆಫೀಸ್, ಹಾಸನ.
76. C. H. ಮುದ್ದಬಸಪ್ಪ, ಮರ್ಚೆಂಟ್ ಗುಂಡ್ಲುಪೇಟೆ, ಮೈಸೂರು ಜಿಲ್ಲೆ.
77. ಬಿ ಶಿವಗಂಗಯ್ಯ, ಇಂಜಿನಿಯರ್, ತಟ್ಟೆಹಳ್ಳ ಡ್ಯಾಮ್, ಉ. ಕ.
78 ಪಿ. ಸುನಂದಮೂರ್ತಿ, ಹೇಮಾವತಿ ಸಾಲೆ. ಹೊಳೆನರಸೀಪುರ.
79. ನಿರ್ವಾಣೇಗೌಡ, ಕಲ್ಲಸೆಟ್ಟಹಳ್ಳಿ ತುಮುಕೂರು ಜಿಲ್ಲೆ.
80. ಎನ್. ಶಿವನಂಜಪ್ಪ ಶಿರಮಳ್ಳಿ, ಮೈಸೂರು ಜಿಲ್ಲೆ.
81. ಎನ್. ಮಲ್ಲೇಶಯ್ಯ ಶಿಕ್ಷಕ ಮರಿಗೌಡನ ದೊಡ್ಡಿ, ಬೆಂಗಳೂರು ಜಿಲ್ಲೆ.
82. ರುದ್ರಪ್ಪ, ಶಿಕ್ಷಕ ಚೀಳೂರು, ಕನಕಪುರ ತಾ|| ಬೆಂಗಳೂರು ಜಿಲ್ಲೆ.
83. ಸಿದ್ಧಲಿಂಗಪ್ಪ, ಶಿಕ್ಷಕ ಕೆಂಬಲೂರು, ತುಮುಕೂರು ತಾ||
84. ಬೀರಯ್ಯ, ಶಿಕ್ಷಕ ಕಾಲನಕೊಪ್ಪಲ್, ಅರಸೀಕೆರೆ ತಾ||
85. ಹೆಚ್. ಪ್ರಕಾಶ್, S/o ಎಸ್. ಹೆಚ್. ಹೊನ್ನಪ್ಪ, ಹಾರಗದ್ದೆ ಆನೇಕಲ್ ತಾ|| ಬೆಂಗಳೂರು ಜಿಲ್ಲೆ.
86. ಎನ್. ಎಲ್. ಮಹದೇವಯ್ಯ ಮಹದೇಶ್ವರ ಸ್ಟೋರ್ಸ್ ನಂಜನಗೂಡು, ಮೈಸೂರು ಜಿಲ್ಲೆ.
87. ಸಿದ್ಧಗಂಗಪ್ಪ, ಶಿಕ್ಷಕ ಸಾಕ್ಷಿಹಳ್ಳಿ, ಸಿರಾ ತಾ|| ತುಮುಕೂರು ಜಿಲ್ಲೆ.
88. ಎಂ. ಆರ್. ಬೈರಪ್ಪ, ನ್ಯಾಷನಲ್ ಹೈಸ್ಕೂಲ್, ಹೊಸೂರು, ಕೋಲಾರ ಜಿಲ್ಲೆ.
89. ಸಿ. ಎನ್. ಮಲ್ಲೇಶಯ್ಯ ಶಿಕ್ಷಕ ತಟ್ಟೇಕೆರೆ, ನೆಲಮಂಗಲ ತಾ|| ಬೆಂಗಳೂರು ಜಿಲ್ಲೆ.
90. ಎಂ. ಎನ್. ಬಸಪ್ಪ ಮಲ್ಲೇನಹಳ್ಳಿ. ತುರುವೇಕೆರೆ ತಾ|| ತುಮಕೂರು ಜಿಲ್ಲೆ.
91. G. ಚಂದ್ರಶೇಖರಯ್ಯ, ಶಿಕ್ಷಕ ಮಳವಾಡಿ, ಕನಕಪುರ ತಾ|| ಬೆಂಗಳೂರು Dist.
92. ಎನ್. ವಿ. ರಾಜು N. C. ವೀರಪ್ಪ, ಭದ್ರಾವತಿ.
93. ಬಿ. ಎಲ್. ಸಿದ್ಧಯ್ಯ, ಶಿಕ್ಷಕ ಸೋಮೇಶ್ವರಪುರಂ, ತುಮುಕೂರು.
94. ಬಸವರಾಜಯ್ಯ, ಇಂಜಿನಿಯರ್ ಎನ್. ಇ. ಎಸ್. ಆಫೀಸು, ಸಿ. ಎನ್ ಹಳ್ಳಿ ತುಮುಕೂರು ಜಿಲ್ಲೆ
95. ಆರ್, ಎಸ್. ಗಂಗಣ್ಣ ಶಿಕ್ಷಕ M. N. ಕೋಟೆ, ಗುಬ್ಬಿ ತಾ|| ತುಮುಕೂರು ಜಿಲ್ಲೆ.
96. G. ಬಸವರಾಜು [H.M.T] ನೆಲಮಂಗಲ, ಬೆಂಗಳೂರು Dist.
97. ಎಸ್. ವಿ. ಮಹದೇವಸ್ವಾಮಿ, ಸುಧಾಕಾಫಿವರ್ಕ್ಸ್, ಸಾತನೂರು ಕನಕಪುರ ತಾ|| ಬೆಂಗಳೂರು Dist.
98. ಬಿ. ಬಿ. ನಂಜುಂಡಯ್ಯ ಬೆಳ್ಳರಹಳ್ಳಿ, ಕೊಡಗುDist.
99. ಕೆ ಶ್ರೀಕಂಠಶೆಟ್ಟಿ ಕಳಲೆ, ನಂಜನಗೂಡು ತಾ|| ಮೈಸೂರು Dist.
100. ಎಸ್. ಬೈರವ, ತಾಲ್ಲೂಕ್ ಆಫೀಸ್ ಚನ್ನರಾಯಪಟ್ಟಣ, ಹಾಸನ Dist.
101. ಕೆ. ದೊಡ್ಡನಂಜಪ್ಪ ಸೋಮೇಶ್ವರಪುರಂ, ತುಮುಕೂರು.
102. ಆರ್. ಬಿ. ಅಯ್ಯಣ್ಣ, ಶಿಕ್ಷಕ ಅಕ್ಕಿಪೇಟೆ ಬೆಂಗಳೂರು-53.
103. H. C. ವಿಶ್ವನಾಥಯ್ಯ C. N ಹಳ್ಳಿ ತುಮುಕೂರು ಜಿಲ್ಲೆ.
104. H. B. ರುದ್ರಪ್ಪ, ತರೀಕೆರೆ, ಚಿಕ್ಕಮಗಳೂರು ಜಿಲ್ಲೆ.

105. ಎಲ್. ಶ್ರೀಕಂಠಯ್ಯ, ಶಿಕ್ಷಕ, ಗುಂಡಕಾನಹಳ್ಳಿ, ಅರಸೀಕೆರೆ ತಾ॥
106. ಮಹದೇವಯ್ಯ, ಸಿದ್ಧಾರ್ಥ ಹೈಸ್ಕೂಲ್, ಹಾಸನ.
107. ಕೆ. ಸಿ. ಚಿಕ್ಕಣ್ಣ, ಜನತಾ ಹೈಸ್ಕೂಲ್, ಪಾತಗಾನಹಳ್ಳಿ ಕೊರಟಗೆರೆ ತಾ॥, ತುಮಕೂರು ಜಿಲ್ಲೆ.
108. ಎನ್. ಚಂದ್ರಶೇಖರಯ್ಯ, ಶಿಕ್ಷಕ, ಬಾಣವಾಡಿ, ಮಾಗಡಿ ತಾ॥, ಬೆಂಗಳೂರು ಜಿಲ್ಲೆ.
109. ಎಂ. ಮಲ್ಲಯ್ಯ, ಸಿದ್ಧಾಪುರ, ಮಧುಗಿರಿ ತಾ॥ ತುಮಕೂರು ಜಿಲ್ಲೆ.
110. ಎಸ್. ಮಹದೇವಯ್ಯ, ಅನುಗೊಂಡನಹಳ್ಳಿ, ತಿಪಟೂರು ತಾ॥ ತುಮಕೂರು ಜಿಲ್ಲೆ.
111. ಸಿ. ಮಹಾಲಿಂಗಪ್ಪ, ದೊಡ್ಡೇನಹಳ್ಳಿ, ಅರಸೀಕೆರೆ ತಾ॥
112. ಜಿ. ಮಹಾಲಿಂಗಪ್ಪ, ಗುಡಿಗೊಂಡನಹಳ್ಳಿ, ತಿಪಟೂರು ತಾ॥ ತುಮಕೂರು ಜಿಲ್ಲೆ.
113. ಹೆಚ್. ಎಸ್. ಹಿರೇಮಠ್, ಧನಕಶಿರೂರು, ಬಾದಾಮಿ ತಾ॥ ಬಿಜಾಪುರ ಜಿಲ್ಲೆ.
114. ಸಿ. ಎನ್. ಚಂದ್ರಶೇಖರಯ್ಯ, ಶ್ರೀ ಸಿದ್ಧಗಂಗಾ.
115. ಹೆಚ್. ವಿ ಉದ್ದಂಡಮೂರ್ತಿ, ಹರ್ತಿಕೋಟೆ, ಹಿರಿಯೂರು ತಾ॥ ಚಿತ್ರದುರ್ಗ ಜಿಲ್ಲೆ.
116. ಹೆಚ್. ಆರ್. ಶಿವಯ್ಯ, ಹೆಡ್‌ಮಾಸ್ಟರ್, ಹುನಸಮಾರನಹಳ್ಳಿ, ಬೆಂಗಳೂರು ಜಿಲ್ಲೆ.
117. ಸಿ. ಎಂ. ಕೊಟ್ಟಬಸಯ್ಯ. ಚಪ್ಪರದಹಳ್ಳಿ, ಕೂಡ್ಲಿಗಿ ತಾ॥ ಬಳ್ಳಾರಿ ಜಿಲ್ಲೆ.
118. ಜಿ ಎಸ್. ನರಸಪ್ಪ, ಶಿಕ್ಷಕ, ಕೆ. ಮತಿಗಟ್ಟ, ಗುಬ್ಬಿ ತಾ॥ ತುಮಕೂರು ಜಿಲ್ಲೆ.
119. ಬಿ. ಕೆ. ತಿಮ್ಮೇಗೌಡ, ಕಾಚೇನಹಳ್ಳಿ. ಗುಬ್ಬಿ ತಾ॥ ತುಮಕೂರು ಜಿಲ್ಲೆ.
120. ಎಸ್. ರುದ್ರಪ್ಪ, ಮಲ್ಲೇಶ್ವರಂ, ಬೆಂಗಳೂರು-3.
121. ಆರ್. ನಟೇಶ್, ದೊ॥ ಬಳ್ಳಾಪುರ, ಬೆಂಗಳೂರು ಜಿಲ್ಲೆ.
122. ಮಹದೇವಪ್ಪ, ಮೈಸೂರು ಬ್ಯಾಂಕ್, ಕೊಳ್ಳೇಗಾಲ, ಮೈಸೂರು ಜಿಲ್ಲೆ.
123. ಎಂ ಆರ್. ಶಿವಣ್ಣ, ಎಂ. ವಿ. ಹೈಸ್ಕೂಲ್. ಬೆಂಗಳೂರು-17.
124. ಎಂ. ಸಿದ್ಧಯ್ಯ, ಶಿಕ್ಷಕ ದಿಬ್ಬದಹಳ್ಳಿ, ಕೂಡ್ಲಿಗಿ ತಾ॥ ಬಳ್ಳಾರಿ ಜಿಲ್ಲೆ.
125. ಬಿ ಮಹಾಲಿಂಗಪ್ಪ, ಹುಣಸೇಕಟ್ಟೆ, ಅರಸೀಕೆರೆ ತಾ॥
126. ಕೆ ಜಿ. ಪಂಚಾಕ್ಷರಯ್ಯ, ಸಿದ್ಧಗಂಗಾ ರೂರಲ್ ಹೈಸ್ಕೂಲ್, ಕಂದಿಕೆರೆ, ಸಿ. ಎನ್. ಹಳ್ಳಿ ತಾ॥ ತುಮಕೂರು ಜಿಲ್ಲೆ.
127. ಡಿ. ನಾಗರಾಜಯ್ಯ, ಶಿಕ್ಷಕ ಕೆಂಬಲಿಂಗದಹಳ್ಳಿ, ಬೆಂಗಳೂರು ಜಿಲ್ಲೆ.
128. ಪಿ. ಚೆನ್ನಪ್ಪ, ಶಿಕ್ಷಕ ಗೋಪಿಕುಂಟೆ, ಸಿರಾ ತಾ॥ ತುಮಕೂರು ಜಿಲ್ಲೆ.
129. ಮಲ್ಲಿಕಾರ್ಜುನಯ್ಯ, ಮಾಚೇನಹಳ್ಳಿ, ತುಮಕೂರು ಜಿಲ್ಲೆ.
130. ಎನ್. ಚಂದ್ರಶೇಖರಯ್ಯ. ಹೊನ್ನೇನಹಳ್ಳಿ, ತುಮಕೂರು ಜಿಲ್ಲೆ.
131. ತೋಂಟದಾರ್ಯ ಸ್ವಾಮಿಗಳು, ಗವಿಮಠ, ಕಗ್ಗೆರೆ, ತುಮಕೂರು ಜಿಲ್ಲೆ.
132. ವಿ. ಎಸ್. ಗಂಗಾಧರಯ್ಯ, ಸುಧಾಮನಗರ, ಬೆಂಗಳೂರು 27.
133. ಸದಾಶಿವಯ್ಯ, ಅರ್ಜುನ ಬೆಟ್ಟಹಳ್ಳಿ ಬೆಂಗಳೂರು ಜಿಲ್ಲೆ.
134. ಹೆಚ್. ಬಿ ಪರಮಶಿವಯ್ಯ, ಹಾಲನೂರು, ತುಮಕೂರು ಜಿಲ್ಲೆ.
135. ಶ್ರೀಮತಿ ಗಿರಿಜಾದೇವಿ ನಂಜುಂಡಪ್ಪ, ಕೆಸ್ತೂರು, ತುಮಕೂರು ತಾ॥
136, ಜಿ. ಗುರುಬಸಪ್ಪ. ಶಿಕ್ಷಕ ಭದ್ರಾವತಿ.
137. ಜಿ. ಕರಿಬಸಪ್ಪ, ಶಿಕ್ಷಕ, ಸಿರಿಗೆರೆ, ಶಿವಮೊಗ್ಗ ಜಿಲ್ಲೆ.
138. ಆರ್. ಕೆ. ತಿಪ್ಪೇಸ್ವಾಮಿ, ಶಿಕ್ಷಕ ಚಿಪ್ಪಿನಕೆರೆ, ಚಿತ್ರದುರ್ಗ ಜಿಲ್ಲೆ.
139. ಕೆ. ಜಿ. ತಿಮ್ಮೇಗೌಡ, ಕೊಂಡಜ್ಜಿ, ತುಮಕೂರು ಜಿಲ್ಲೆ.
140. ಸಿ. ಕಪ್ಪಣ್ಣ. ಚಾಮರಾಜಪೇಟೆ, ಬೆಂಗಳೂರು-18.
141. ಎನ್. ಜಿ. ಚಂದ್ರಶೇಖರಯ್ಯ, ಶಿಕ್ಷಕ ರಂಗೇನಹಳ್ಳಿ, ಚಿಕ್ಕಮಗಳೂರು ಜಿಲ್ಲೆ.
142. ಜಿ. ರಾಜಣ್ಣ, ಶಿಕ್ಷಕ, ಅಮ್ಮನಘಟ್ಟ. ತುಮಕೂರು ಜಿಲ್ಲೆ.
143. ಎ. ಆರ್. ಸೋಮಶೇಖರಯ್ಯ, ಆನೇಕಟ್ಟೆ, ತುಮಕೂರು ಜಿಲ್ಲೆ.
144. ಬಿ. ಎಸ್. ಬಸವಣ್ಣ, ಬೇಡಗೊಟ್ಟೆ. ಉತ್ತರ ಕೊಡಗು.
145. ಬಿ. ಚೆನ್ನಬಸಪ್ಪ. ಮಂಟಪ, ಬೆಂಗಳೂರು-29.
146. ಬಸವರಾಜು, ಶಿಕ್ಷಕ, ಹಸ್ಸಿ, ಹೆಚ್. ಬಿ. ಹಳ್ಳಿ ತಾ॥ ಬಳ್ಳಾರಿ ಜಿಲ್ಲೆ.
147. ಎಂ. ಎಸ್. ಮಲ್ಲೇಶಯ್ಯ, ಶಿಕ್ಷಕ ಚೀಲಸಾಯ್ಯನಹಳ್ಳಿ, ಬೇಲೂರು ತಾ॥ ಹಾಸನ ಜಿಲ್ಲೆ.

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

**ಅನುಕೂಲಾಂ ವಿಮಲಾಂಗೀಂ ಕುಲಜಾಂ ಕುಶಲಾಂ ಸುಶೀಲ ಸಂಪನ್ನಾಂ ।**
**ಪಂಚಲಕಾರಾಂ ಭಾರ್ಯಾಂ ಪುರುಷಃ ಪುಣ್ಯೋದಯಾಲ್ಲಭತೇ॥**

ಅನುಕೂಲೆಯೂ ವಿಮಲಾಂಗಿಯೂ ತಾನಿರ್ತ
ಉತ್ತಮ ಕುಲಜಳೂ ಕುಶಲ ಬುದ್ಧಿಯೂಮತ್ತಿರ್ಪ
ಸುಶೀಲವತಿಯೂ ಎಂದೆಂಬ ಈ ಐದು ಲಕಾರದಿಂದೆ
ಸತಿ ದೊರಕುವಳು ಪುರುಷನಿಗೆ ಪುಣ್ಯ ಫಲದಿಂದೆ.

  

**ಯಥಾ ಚಿತ್ತಂ ತಥಾ ವಾಚಃ ಯಥಾ ವಾಚಸ್ತಥಾ ಕ್ರಿಯಾಃ**
**ಚಿತ್ತೆ ವಾಚಿ ಕ್ರಿಯಾಯಾಂಚ ಸಾಧೂನಾಮೇಕರೂಪತಾ ॥**

ಮನಸ್ಸಿನಲ್ಲಿರುವಂತೆ ಮಾತನಾಡಿ ತೋರುವರು
ಮಾತನಾಡಿದಂತೆ ಕಾರ್ಯಮಾಡಿ ತೋರಿ ಬಿಡುವರು,
ಮಾತು ಮನ ಕಾರ್ಯ ಈ ಮೂರರಲ್ಲಿ
ಒಂದೇ ಬಗೆ ತಾನಿರುವುದು ಸಾಧು ಸಂತರಲ್ಲಿ.

  

**ಶುಷ್ಕೈಃ ಕಾಷ್ಠೈರ್ಭವೇತ್ ಕಾರ್ಯಂ ಲೋಷ್ಟೈರಪಿ ಚ ಪಾಂಶುಭಿಃ ।**
**ನತು ಸ್ಥಾನಾತ್ ಪರಿಭ್ರಷ್ಟೈಃ ಕಾರ್ಯಂ ಸ್ಯಾದ್ವಸುಧಾಧಿಪೈಃ ॥**

ಒಣಕಟ್ಟಿಗೆಯಿಂದ ಉಂಟು ಪ್ರಯೋಜನ
ದೊರಕುವುದು ಮಣ್ಣು ಎಂಟೆಯಿಂದ ಪ್ರಯೋಜನ,
ಕಡೆಗೆ ಧೂಳುಕಣದಿಂದಲೂ ಉಂಟು ಉಪಯೋಗ
ಸ್ಥಾನಭ್ರಷ್ಟ ರಾಜನಿಂದ ಉಂಟು ಯಾವ ಉಪಯೋಗ ?

—'ಕಾವ್ಯ ಸುಧಾ ಪ್ರಿಯ'

## ಅಮೃತ ಬಿಂದು

ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ।– ತನ್ನ ತನ್ನ ಕರ್ಮದಲ್ಲಿ ನಿರತನಾಗಿದ್ದರೆ ಮನುಷ್ಯನು ಸಿದ್ಧಿಯನ್ನು ಹೊಂದುವನು. ಹೀಗೆಂದು ಭಗವಂತನ ಭಗವದ್ಗೀತೆಯಲ್ಲಿನ ಒಂದು ಉಪದೇಶ ಸೂಕ್ತಿ. ವ್ಯಕ್ತಿಯ ಬದುಕಿನ ಪರಿಪೂರ್ಣತೆ ಆತನು ನಿರತನಾಗಿರುವ ಕರ್ಮದ ಪರಿಪೂರ್ಣತೆಯನ್ನವಲಂಬಿಸಿದೆ. ಇಲ್ಲಿ ಕರ್ಮವೆಂದರೆ ಕೆಲಸ. ತನ್ನ ಬದುಕನ್ನು ಬಂಗಾರ ಗೊಳಿಸುವ ಕಾರ್ಯ ಸಾಧನ. ತನ್ನ ತಾನು ಉದ್ಧಾರ ಮಾಡಿಕೊಳ್ಳಲು ಭಗವಂತನಿಂದ ವಿಧಿಸಲ್ಪಟ್ಟ ಕಾರ್ಯ ವಿಧಾನ. ಅಂದ ಮೇಲೆ ಮನುಷ್ಯ ಮಾತ್ರನಾದವನು ಹುಟ್ಟಿಸಿದ ದೇವರು ಹುಲ್ಲುಮೇಯಿಸಾನೆ ಎಂದು ಮೂಢ ನಂಬಿಕೆಯನ್ನು ಮುಂದು ಮಾಡಿಕೊಂಡು ಮಲಗದೆ, ಪಾಲಿಗೆ ಬಂದುದು ಪಂಚಾಮೃತವೆಂದು ಅರಿತು ಕಾರ್ಯೋನ್ಮುಖರಾಗಬೇಕು. ಇದು ಭಗವಂತನ ಅಪ್ಪಣೆ ಎಂದು ಭಾವಿಸಿ ವೈಗಳ್ಯರಾಗದೆ ಕಾಯೇನ ವಾಚಾ ಮನಸಾ ಕರ್ತವ್ಯ ಶೀಲರಾಗಬೇಕು. ತಾನು ಮಾಡಬೇಕೆಂದಿರುವ ಕಾರ್ಯವನ್ನು ಮಾಡದೆ, ಮತ್ತೊಬ್ಬರ ಮೇಲೇರುವ ಮನೋಭಾವವನ್ನು ಮರೆತು, ಮಹಾದೇವನ ಅಪ್ಪಣೆ ಎಂದು ಬಗೆದು ಮನಃಪೂರ್ವಕವಾಗಿ ಮಾಡಬೇಕು. ಆ ರೀತಿ ದೊರೆತ ಕೆಲಸದಲ್ಲಿ ಆಸಕ್ತಿ ಮೂಡುತ್ತದೆ. ನನ್ನದೆಂಬ ಅಭಿಮಾನ ಮೂಡುತ್ತದೆ. ಅಭಿಮಾನವೇ ಐಶ್ವರ್ಯವಾಗಿ ಪರಿಣಮಿಸುತ್ತದೆ. ಆಗ ನಾವು ಕೈಕೊಂಡ ಕಾರ್ಯ ಕೈಗೂಡುತ್ತದೆ. ನಮ್ಮ ನಿರೀಕ್ಷಣೆಯನ್ನು ಮೀರಿ ಕಾರ್ಯದಲ್ಲಿ ಯಶಸ್ಸು ದೊರೆಯುತ್ತದೆ. ಆಗ ನಮಗೆ ತೃಪ್ತಿ ಸಮಾಧಾನ ನೆಮ್ಮದಿ ದೊರೆಯುತ್ತದೆ. ನಮ್ಮ ಪ್ರಯೋಜನದ ಸಿದ್ಧಿ ಶ್ರೇಯಸ್ಸು ಸಮೀಪಿಸುತ್ತದೆ.

—ದುಂಬಿ

# ಮಹಾಕಾಲ

—"ಹರಿಚರಣ"

ಉಜ್ಜಯಿನಿಯ ಮಹಾಕಾಲ ದರ್ಶನ ಮಹಾ ಪ್ರಸಿದ್ಧಿ. ಆ ಮಹಾಕಾಲ ಸನ್ನಿಧಿ ಕಾಳಿದಾಸ ಮಹಾಕವಿಯ ಮೇಘ ದೂತ ದಂತಹ ರಮ್ಯ ಭಾವಗೀತೆಯ ರಚನೆಗೆ ಸ್ಫೂರ್ತಿದಾಯಿ. ಅದನ್ನು ಪ್ರತ್ಯಕ್ಷದರ್ಶಿಯಾದ ಲೇಖಕರು ರಮ್ಯವಾಗಿ ರೂಪಿಸಿದ್ದಾರೆ

---

ಮಹಾದೇವನ "ಮಹಾಕಾಲ ಗರ್ಭ ದೊಳಕ್ಕೆ ಅನಂತ ಕಲ್ಪಾಂತರಗಳು ಉರುಳಿಹೋಗಿವೆ. ಅದರಲ್ಲಿ ಅಡಗಿ ಹೋದ ಘಟನಾವಳಿಗಳು ಅಗಣಿತ. "ಮಹಾಕಾಲನ" ದಿವ್ಯ ಸನ್ನಿಧಿಯೂ ಜ್ಯೋರ್ತಿಲಿಂಗ ಮಹಾ ಪುಣ್ಯಕ್ಷೇತ್ರವೂ ಆದ ಉಜ್ಜಯಿನಿಯಲ್ಲಿಯೇ ಆಗಿ ಹೋದ ಘಟನೆಗಳಂತೂ ಅದ್ಭುತ, ರಮ್ಯ! ಈ ಈ ಪಾವನ ಕ್ಷೇತ್ರದಲ್ಲಿ ತ್ರಿಪುರ ಸಂಹಾರವಾದುದೇನು ಗೌಣವೆ? ಶ್ರೀ ಕೃಷ್ಣ, ಬಲರಾಮರು ಪ್ರಾತಃ ಸ್ಮರಣೀಯರಾದ ಕುಚೇಲಾದಿಗಳನ್ನು ಸಹಪಾಠಿಗಳಾಗಿ ಹೊಂದಿ, ಸಾಂದೀಪಿನೀ ಗುರು ಸಾನ್ನಿಧ್ಯದಲ್ಲಿ ವ್ಯಾಸಂಗ ಮಾಡಿದ -ಈ ತಾಣವು ಪುನೀತವಾದುದಲ್ಲವೆ? ವಿಕ್ರಮಾದಿತ್ಯನು ಇದನ್ನು ಭರತಖಂಡದ ರಾಜಧಾನಿ ಯಾಗಿಸಿ, ನ್ಯಾಯೈಕ ಪಕ್ಷಪಾತಿಯಾಗಿ ಆಳಿದುದೇನು ಕಡಿಮೆಯೇ? ಹನ್ನೆರಡು ವರ್ಷಗಳಿಗೊಮ್ಮೆ ಇಲ್ಲಿ ಸಮಾವೇಶಗೊಳ್ಳುವ ಕುಂಭಮೇಳವು ಸಾಮಾನ್ಯವಾದು ದಲ್ಲ. ಅಶೋಕನ ಶಾಸನವಲ್ಲಿಯೂ, ಪೆರಿಕ್ಲಿಸ್ ಟಾಲಿಮಿಯ ಕಡತದಲ್ಲಿಯೂ ಉಜ್ಜಯಿನಿಯ ಪ್ರಸ್ತಾಪ ಬಂದಿ ರುವುದಂತೂ ಅವಂತಿಯ ಪ್ರಾಚೀನತೆಗೂ, ಚಾರಿತ್ರಿಕ ಹಿರಿಮೆಗೂ ಸಾಕ್ಷಿಯಾಗಿದೆ ಇಲ್ಲೊಂದು ತಾರಾ ಶಶಾಂಕ ವೀಕ್ಷಣಾಲಯವೂ ಇದೆ.

ಚಂದ್ರಚೂಡನಾದ ಚಿದಂಬರನೇ ಘನಘೋರ ತಪೋದ್ಯಮದಲ್ಲಿದ್ದ ತೃಷೋದಧಿಗೆ ಸಾಕಾಗುವವರೆಗೂ ತಪಸ್ಸು ಮಾಡಲು ಅವಕಾಶವಾಗುವ ವರವನ್ನು ಕರುಣಿಸುತ್ತನಾದರೂ ತೃಷೋದಧಿಯಲ್ಲಿಯೇ ಅವನ (ತೃಷೋದಧಿ) ನಾಶದ ಬೀಜವಿರುವುದನ್ನು ತಿಳಿದೇ ಇರುತ್ತಾನೆ.

ದೇವತೆಗಳ ಕುಟಿಲೋಪಾಯದಿಂದ ತನ್ನ ಪ್ರಿಯತಮೆಯಾದ ವತ್ಸತರೀ ಸ್ಮರಣೆಯ ಹೊಸೆತ ದಿಂದಾದ ತಂತುವಿನಿಂದಲೇ ತೃಷೋದಧಿಯು ಬಂಧಿಸಲ್ಪಟ್ಟು ಅಧೋಗತಿಗೆಳೆಯಲ್ಪಡುತ್ತಾನೆ ತನ್ನರ್ಧಾಂಗಿ ಯನ್ನು ನಂಬುವ ಶಕ್ತಿಯೂ ಇಲ್ಲದೆ ಅವಳನ್ನು ಮರೆ ಯಲೂ ಆಗದೆ ಕೊಳಲಿ ಮಹೋನ್ನತ ತಪೋ ಪೀಠ ದಿಂದ ಉರುಳಿ ಪಶ್ಚಾತ್ತಾಪದ ಅಗ್ನಿ ಕುಂಡಕ್ಕೆ ಬಿದ್ದು ಬಿಡುತ್ತಾನೆ!

ಗೌರೀವರನೂ, ಸ್ಮರಾರಿಯೂ ಆದ ಪಶು ಪತಿಯು ಮಹಾನ್ ಕಥೆಗಾರ ಮಹಾರೋಚಕವೂ, ಅತ್ಯುದ್ಬೋಧಕವೂ ಆದ ಸತ್ಯ ಕಥೆಯನ್ನು ವಿಸ್ತರಿಸಿ ನಮ್ಮಲ್ಲಿರುವ "ತೃಷೋದಧಿ" ಯನ್ನೂ "ರುರು" ವನ್ನೂ ಎಚ್ಚರಿಸಿದ್ದಾನೆ. ಕರುಣಾಲವಾಲ ಕಪರ್ದಿ ಹೇಳಿದ ಈ ಕಥೆಯು ಕುಟಿಲಾತ್ಮಕ್ಕೆ ಕಠೋರವಾಗಿರುವಂತೆಯೇ ಸುಕೃತಾತ್ಮಗಳಿಗೆ ದಾರಿದೀಪವಾಗಿದೆ. ಇದೊಂದು ಅನುಪಮ ಕಥಾ ಮಣಿ. ಇದನ್ನು ನೆನೆದು ಶಿವನು ಶಿವೆ ಯೊಡನೆ ನಕ್ಕುದು ಇಲ್ಲಿಯೇ, ಈ ಉಜ್ಜಯಿನಿಯಲ್ಲಿಯೇ!

ಕವಿ ಸಾರ್ವಭೌಮ ಕಾಳಿದಾಸನ "ಮೇಘ ದೂತ" ದಂತಹ ಸುರಮ್ಯ ಭಾವಗೀತೆಗೆ "ಮಹಾಕಾಲ"

ಸನ್ನಿಧಿಯು ಸ್ಫೂರ್ತಿದಾಯಿಯಾದುದು ಲೋಕದ ಸುಕೃತ. ಕಾಳಿದಾಸನಿಗೆ ವಿಶ್ವಸೃಷ್ಟಿಯ ಸೌಂದರ್ಯ ರಹಸ್ಯವು ಇಲ್ಲಿಯೇ ಪ್ರಕಟವಾದುದು ಸಮುಚಿತ ವಾದುದೇ. ಪ್ರೇಮವೇ ವಿಶ್ವದಪ್ರತಿಯೊಂದು ವಸ್ತುವಿನಲ್ಲಿಯೂ ಪರಿಶೋಭಿಸುವುದನ್ನು ವಿಶ್ವಕವಿಯು ಪ್ರಾಯಃ ಪವಿತ್ರ ಸಿಪ್ರಾತಟದಲ್ಲಿಯೇ ಕಂಡುದರಲ್ಲಿ ಔಚಿತ್ಯವಿದೆ. ಸಾತ್ವಿಕ ಭಾವಾಪನ್ನರಿಂದಲೂ ಋತ್ವಿಜರಿಂದಲೂ ಸಂಪನ್ನವಾಗಿದ್ದ ಉಜ್ಜಯಿನಿಯ ಸಜ್ಜನ ಸಂಪದವನ್ನು ಸಿಪ್ರಾನದಿಯನ್ನೇಲಿ ಬೀಸುವ ಮಂದಾನಿಲವು ಹಾರ್ದಿಕವಾಗಿ ಸ್ವಾಗತಿಸುತ್ತಿದ್ದುದರಿಂದ ಕಾಳಿದಾಸನು ಅತಿ ಪ್ರಭಾವಿತನಾಗಿಬೇಕು.

ಮೇಘದಲ್ಲಿಯೂ ಸಚ್ಚೇತನಾನುಕಂಪದ ಪರಮ ಸೌಂದರ್ಯವನ್ನು ಕಾಣುತ್ತಾನೆ ಕಾಳಿದಾಸ. ಆದರ ಮೇಲಿಂದಲೇ ಹೃದಯಾಂತಃಕರಣವನ್ನು ತಾಗುವ ವಿರಹ ಭಾವಗೀತೆಯ (ವಿಪ್ರ-ಲಂಭ) ಸುಂದರ ತುಷಾರದ ಆವಿಷ್ಕಾರವಾಗುತ್ತದೆ. ಆಷಾಢದ ಮೇಘ ದರ್ಶನ ಮಾತ್ರದಿಂದ ರಾಮಗಿರಿವಾಸಿಯಾಗಿದ್ದ (ಕುಬೇರಾಗ್ರಹ ಪೀಡಿತ) ಅದಮ್ಯ ವಿರಹದ ಯಕ್ಷನಿಗೆ ಪ್ರೇಮದ ಉರುಳಿನ ಬಿಗಿ ಹೆಚ್ಚುತ್ತದೆ ಉತ್ತರಾಭಿಮುಖವಾಗಿ ಅಲಕಾಪುರಿಯಕಡೆಗೆ ಹೊರಟ್ಟಿದ್ದ ಮೇಘವನ್ನು ಕರೆದು, ಪ್ರಿಯಾ ವಿರಹವನ್ನು ಹೇಳಿಕೊಳ್ಳುತ್ತಾನೆ; ಸಂದೇಶವನ್ನು ಮುಟ್ಟಿಸುವಂತೆ ಕೇಳಿಕೊಳ್ಳುತ್ತಾನೆ. ಈ ಮೇಘ ರೂಪೀ "ದೂತಮಿತ್ರ'' ನು, ಸುಖ ದುಃಖಗಳಿಗೆ ಹೊರತಲ್ಲದ "ಯಕ್ಷ–ಮಾನವ'' ನಿಗೆ ಪರಮ ಮಿತ್ರನಾದುದು ಕಾಳದಾಸನ ಕಾವ್ಯ ಪ್ರತಿಭೆಯಿಂದ ನೈಜವಾಗಿಯೇ ತೋರುತ್ತದೆ!

ಸರಿ, ಮೇಘಾಯಣ ಪ್ರಾರಂಭ. ವಿಂಧ್ಯಾಟವಿ. ಅನಂತ ಕಾಲದಿಂದ ಉಚ್ಚಕೋಟಿಯ ಸಂತ ಮಹಂತರ, ತಮ್ಮ ಇತಿಹಾಸವನ್ನು ಕ್ಷಾತ್ರ ತೇಜಸ್ಸಿನಿಂದ ರಂಜಿಸಿದ ಕ್ಷತ್ರಿಯ ವೀರರ ರಾಜ್ಯ ಕೋಶಗಳು, ನಿಸರ್ಗ ಶೋಭೆಯ, ಉದ್ದಾಮ ವೇಗದ ನರ್ಮದಾ ನದೀ ತಟದಲ್ಲಿ ಕಾಣಿಸುವುವು. ಧಸಾನ ನದಿಯ ಮಂಗಳ ದರ್ಶನವನ್ನೂ ಇದರ ಜಲಾನಯನ ಭೂಮಿಯಿಂದ ಪರಿಶೋಭಿಸುವ ದಶಾರ್ಣ ದೇಶವನ್ನೂ ಹಾದುಹೋಗುತ್ತಾನೆ ಮೇಘ ಮಿತ್ರ. ನೇತ್ರವತಿ ವಿದಿಶಾ, ನಿರ್ವಿಂಧ್ಯಾದಿಗಳೂ ಆಮೇಲೆ ಸಿಪ್ರಾನದಿಯೂ ಕಂಗೊಳಿಸುತ್ತವೆ.

ಸಿಪ್ರಾತಟದಲ್ಲಿ "ಮಹಾಕಾಲದ" ಸಂಶೋಭಿತವಾದ ಉಜ್ಜಯಿನಿಯು ಪ್ರೋಜ್ವಲವಾಗಿ ಮೆರೆಯುತ್ತಿದ್ದಿತು ಅತಿ ಪುರಾತನ, ಪೌರಾಣಿಕ ಹಾಗೂ ಐತಿಹಾಸಿಕ ಮಹಾವಿದ್ವನ್ನಗರವಾಗಿದ್ದ ಉಜ್ಜಯಿನಿಯನ್ನು ಈಗ ನೋಡಿದರೂ ಇದರ ಪ್ರಾಚೀನತೆಯೂ, ಅಪೂರ್ವ ಪ್ರಾಚೀನ ವೈಭವವು ಮನ ಮುಟ್ಟುವಂತಿದೆ. ವಿಕ್ರಮ ಶಕೆಯ ಆದಿಕಾಲವು ಮತ್ತೊಮ್ಮೆ ಸಜೀವವಾಗಿ ಬಂದಂತಾಗುತ್ತದೆ. ಇಕ್ಕೆಲಗಳಲ್ಲಿ ವಿಶಾಲ ಹರ್ಮ್ಯಗಳಿಂದ ಕಂಗೊಳಿಸುವ ಹೆಬ್ಬೀದಿಗಳಿವೆ. ವಿಲಾಸಿನೀ ನಿಕರದಿಂದಲೂ, ವಿದುಷಿಯರಿಂದಲೂ ವಿದ್ಯಾಸಕ್ತ ವಿದ್ವಾಂಸರಿಂದಲೂ ತುಂಬಿದೆ.ಮಹಿಮೋಪೇತವಾದ ಅವಂತಿ. ಅಲ್ಲಲ್ಲಿ "ಮದನವಿಲಾಸ" ಬನಗಳಿವೆ, ಸುತ್ತಲೂ "ಗಂಧಶಾಲಿವನ" ಗಳಿವೆ. ಮಿಗಿಲಾಗಿ "ಮಹಾಕಾಲ" ಮಹಾದೇವನು ವಿಶ್ವವ್ಯಾಪಾರವನ್ನು ನೋಡುತ್ತ ವಿರಾಜಮಾನನಾಗಿದ್ದಾನೆ 'ಧರ್ಮದಿಂಅರ್ಥಮಂ' ಸಂಪಾದಿಸುವ ವಣಿಗ್ವರರ ವ್ಯಾಪಾರ ಚತುರತೆಯೂ ಮಹಾಕಾಲನ ದೃಷ್ಟಿಗೆ ಬೀಳುತ್ತದೆ.

ಯಕ್ಷನ ಮೇಘ ಮಿತ್ರನಿಗೆ ಮುಂದೆ ಗಂಭೀರಾ, ರಂತಿ ದೇವನನ್ನು ನೆನಪು ಮಾಡುವ ವೈದಿಕ ನದಿಯಾದ ಚರ್ಮಣ್ವತಿ, ಸರಸ್ವತೀ, ಗಂಗಾದಿ ದಿವ್ಯ ನದಿಗಳೂ; ಕುರುಕ್ಷೇತ್ರ, ಕೈಲಾಸಾದಿ ದಿವ್ಯಭವ್ಯ ದೃಶ್ಯಗಳೂ ಕಾಣಿಸಿ ಕೊಂಡುವು. ಸಹಯಾತ್ರಿಕರಾದ ಅರಸಂಚೆಗಳೊಡನೆ, ಸಾರಂಗ ನಿರ್ದೇಶನದಲ್ಲಿ, ಉಪಚರಿಸುವ ಆಮ್ರಕೂಟಾದಿಗಿರಿ ಶಿಖರ ಮೇಲ್ವಾಯ್ದು ಬಂದ 'ಮೇಘ' ವು ಕೈಲಾಸದ ತುದಿಯ ಅಲಕಾಪುರಿಗೆ ಆಗಮಿಸಿ, 'ಸಂದೇಶ' ವನ್ನು ಮುಟ್ಟಿಸುತ್ತದೆ. "ಕಾಲದ" ಗಡುವು ಬರಲು ಯಕ್ಷ-ಯಕ್ಷಿಯರ ಪ್ರೇಮ ಸಂಗಮವಾಗುತ್ತದೆ. ವಿಶ್ವ ಕವಿ ಕಾಳಿದಾಸನ ಹೃದಯಂಗಮ ವಿರಹ ಭಾವಗೀತೆಯಾದ "ಮೇಘ ಸಂದೇಶವು"

25 ನೇ ಪುಟ ನೋಡಿ

# ಶಸ್ತ್ರಧಾರಿ ಮಹಿಳೆಯರು

ಎಸ್. ಎಸ್. ಗದಗಕರ

ನಮ್ಮ ದೇಶದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಶಸ್ತ್ರಧಾರಿ ಮಹಿಳಾ ಪಡೆಯಿತ್ತು. ಅವರು ಪುರುಷ ಪಡೆಗೆ ಯಾವ ಎಡ ಅನಿಸುತ್ತಿರಲಿಲ್ಲ. ಇದಕ್ಕೆ ಅನೇಕ ಚಾರಿತ್ರಿಕ ದಾಖಲೆಗಳಿವೆ. ಇದನ್ನು ಮಾನ್ಯ ಲೇಖಕರು ಸಾಧಾರ ನಿರೂಪಿಸಿ ಇಂದೂ ಅಂಥ ಮಹಿಳಾ ಪಡೆಯ ಔಚಿತ್ಯಗಳನ್ನು ಕುರಿತು ಸಲಹೆ ಕೊಟ್ಟಿದ್ದಾರೆ ಸಂ.

ಶ್ರೀರ ಪ್ರಾಚೀನ ಕಾಲದ ಶಸ್ತ್ರಧಾರಿ ಮಹಿಳೆಯೆಂದರೆ ವೈಭವಶಾಲಿ ಅರಸರ ದರ್ಬಾರಿನಲ್ಲಿದ್ದವರು. ಆ ದೊರೆಗಳು ಪ್ರಭಾತ ಕಾಲದಲ್ಲಿ ಸಿದ್ದೆ ಕಳೆದೆದ್ದು ಹೊರಬರುವ ಕಾಲಕ್ಕೆ ಧನುರ್ಧಾರಿ ಮಹಿಳೆಯರ ತಂಡ ಸ್ವಾಗತಿಸುತಿತ್ತಂತೆ! ಅರ್ಥಶಾಸ್ತ್ರದ ಕೌಟಿಲ್ಯನ ಈ ಉದ್ಗಾರಕ್ಕೆ ಪೋಷಕವಾಗುವಂತೆ, ಕರ್ಚಿಯಸ್ ಎಂಬ ವಿದೇಶಿ ಯಾತ್ರಿಕನು ವಿವರಗಳನ್ನು ಒದಗಿಸಿರುವನು. ಅವನ ಮೇರೆಗೆ ದೊರೆಯ ಪಾರ್ಶ್ವದಲ್ಲಿ ಸದೈವ ಇರ್ವರು ಮೂವರು ಶಸ್ತ್ರಧಾರಿ ಲಲನೆಯರು ಇದ್ವೇ ಇರುತ್ತಿದ್ದರು. ಅವರು ಅಲಂಕಾರ ದೋಪಾದಿ ಬರಿ ನಿಲ್ಲುವವರಿರಲಿಲ್ಲ. ಅವರು ಸುವಿಖ್ಯಾತ ಅಶ್ವಾರೋಹಿಣಿಯರು. ರಥವಾಹಿಕೆಯರು ಇದ್ದರಲ್ಲದೆ ಆನೆಗಳನ್ನು ನಡಿಸುತ್ತಿದ್ದರು. ಅವರ ಶಸ್ತ್ರಾಸ್ತ್ರಗಳೂ ವಿಭಿನ್ನ ಚಿರನೂತನ! ಒಟ್ಟಿನಲ್ಲಿ ಅವರಿಗೆ ಶುದ್ಧವಾದ ಲಷ್ಕರಿ ಶಿಕ್ಷಣ ದೊರೆತಿದ್ದಿತು.

ಕವಿ ಕುಲಗುರು-ಕಾಲಿದಾಸನ ಖ್ಯಾತ ಕಾವ್ಯಗಳಲ್ಲಿಯೂ ಇದೇ ಮಾದರಿಯ ಉಲ್ಲೇಖಗಳುಂಟು (ಕ್ರಿ. ಶ. ೩, ೪ನೇ ಶತಮಾನ.) ಅವನ ರಘುವಂಶ ಮಹಾಕಾವ್ಯದಲ್ಲಿ ಧನುರ್ಧಾರಿಯವನಿಯರ ವರ್ಣನೆ ಬರುವದು. ರಘುರಾಜನ ಕಾಲಕ್ಕೆ ಅವರಿಗೆ ಅಖಂಡ ಪ್ರಾಶಸ್ತಿ ಇದ್ದಿತು. ಈ ಯವನಿಯರೆಂದರೆ ಗ್ರೀಕರೋ, ಬ್ಯಾಕ್ಟ್ರಿಯನ್ನರೋ ಎಂಬುದು ಸುನಿಶ್ಚಿತವಾಗಿ ತಿಳಿಯದು ಆದರೂ ಪರನಾಡುಗಳಿಂದ ಭಾರತಕ್ಕೆ ಮಹಿಳೆಯರನ್ನು ವಲಸೆ ತರುವ ಪರಿಪಾಠ ಅನಾದಿ ಕಾಲದಿಂದ ಇದ್ದಿರಲು ಸಾಕು.

ಶಸ್ತ್ರಧಾರಿ ಮಹಿಳೆಯರಿದ್ದರು, ನಮ್ಮ ಭಾರತ ಖಂಡದಲ್ಲಿ ಹಿಂದಕ್ಕೆ, ಎಂದರೆ, ಈಗಿನ ಮನ್ವಂತರದ ಜನಕ್ಕೆ ಅತ್ತೀವ ಅಚ್ಚರಿ ಕಟ್ಟುಕತೆ ಎನಿಸುವಂತದೆ. ಅವರಿಗೆ ಹಿಂದಕ್ಕೆ ವಿವಿಧ ಶಸ್ತ್ರಗಳ ಬಳಕೆಯ ಸುವ್ಯವಸ್ಥಿತ ತರಬೇತು ಇದ್ದಿತಲ್ಲದೆ, ಅವರವು ಸಮಗ್ರ ಪಡೆಗಳೇ ನೆಲಸಿದ್ದವು ಕೆಲವು ವಿಭಾಗಗಳಿಗೆ ಅವರು ಮುಖ್ಯಸ್ಥರೆನಿಸಿದ್ದರು. ದೊರೆಗಳೆದುರು ಅವರ ಶಿಸ್ತಿನ ಕೂಚು ನಡೆಯುತ್ತಿತ್ತು. ಯುದ್ಧಗಳಲ್ಲಿ ಅವರು ಭಾಗವಹಿಸುತ್ತಿದರು, ಈ ಪರಂಪರೆಯು ಶತ ಶತಮಾನಗಳ ವರೆಗೆ ಹಿಂದೂ, ಸೀಖ,ಮುಸ್ಲಿಂ ಅರಸರ ರಾಜ್ಯಗಳಲ್ಲಿ ಪ್ರಚಲಿತವಿದ್ದಿತು. ಅನ್ಯ ದೇಶಗಳಲ್ಲಿಯೂ ಇದೇ ಪದ್ಧತಿ ನೆಲಸಿರಬೇಕು.

## ಅನುಪಮ ಶೌರ್ಯಾನ್ವಿತರು

ಮಧ್ಯ ಯುಗದಲ್ಲಿ ಶಸ್ತ್ರಧಾರಿ ಮಹಿಳೆಯರು ಭಾರತದಲ್ಲಿ ನೆಲಸಿದಂತೆ ಜವಾಡಲ್ಲಿಯೂ ಇದ್ದರು. ಇಬನ್‌ಬಟೂವಾ ಎಂಬ ಮುಸ್ಲಿಂ ಪ್ರವಾಸಿಯು ತನ್ನ ಕಾಲಕ್ಕೆ-೧೪ನೇಯ ಶತಮಾನದಲ್ಲಿ-ಕಾಡ ಮಹಿಳೆಯರನ್ನು ಬಣ್ಣಿಸಿರುವನು. ಅವರು ಶಸ್ತ್ರ ವಿದ್ಯಾ ಪರಿತಣತರಿದ್ದು

ರಾಣಿಯರೊಡನೆ ಸರಿಸಮಾನಸ್ಕಂದಳೆಯಲ್ಲಿ ಅಣುಕು ಹೋರಾಟ ನಡೆಸುತ್ತಿದ್ದರು. ಆವರು ಪುರುಷರಿಗೆ ಯಾವ ಮಾನದಲ್ಲಿಯೂ 'ಎಡ' ಅನಿಸುತ್ತಿರಲಿಲ್ಲ. ಕವಲಿನ (ಜಾವಾಯ) ರಾಣಿಯ ವಶದಲ್ಲಿದ್ದ ಮಹಿಳಾ ಪಡೆಯು ಖರ್ಜನಲ್ಲಿಗಳನ್ನು ಅತ್ಯಂತ ಕೌಶಲದಿಂದ ಒಳಸುತ್ತಿತು. ಎಂಥ ಹೋರಾಟದಲ್ಲಿಯೂ ಪುರುಷವರ್ಗದೊಡನೆ ಹಿಂದೆ ಬಿದ್ದು ಅವರು ಅರಿಯರು. ರಾಣಿಯು ಇಂಥಹ ಪರಿವಾರದಿಂದ ಶತ್ರುಗಳನ್ನು ಎದುರಿಸಿ ನಿರ್ನಾಮ ಮಾಡಿದ ನಿದರ್ಶನಗಳೂ ಅನೇಕ ಪ್ರಚಲಿತವಿವೆ.

ವಿಜಯನಗರ ದೊರೆಗಳ ಆಸ್ಥಾನದಲ್ಲಿ ಶಸ್ತ್ರಸನ್ನದ್ಧ ಮಹಿಳಾ ಸೈನ್ಯವಿದ್ದಿತು ಕೃಷ್ಣ ದೇವರಾಯನ ಆಳಿಕೆಯಲ್ಲಿ, ೧೫೨೦ ರಿಂದ ೧೫೨೨ರವರೆಗೆ, ಅವನ ರಾಜ್ಯವನ್ನೇ ಸಂದರ್ಶಿಸಿದ ಪೇಜ್ ಎಂಬ ಪ್ರವಾಸಿಯು ಅಲ್ಲಿ ೧೨೦೦೦ ಸ್ತ್ರೀ ಸೈನಿಕರಿದ್ದರೆಂದು ಬರೆದಿಟ್ಟಿರುವನು. ಅವರಲ್ಲಿ ಹಲವರು ಕತ್ತಿವರಸೆ ಕಾಳಗದಲ್ಲಿ ಮುಂದುವರಿದವರು, ಕೆಲವರು ನಮಗೆ ಇಂದೂ ಅಚ್ಚರಿ ರೋಮಾಂಚಕ ಎನಿಸುವಂತೆ ಮಲ್ಲಕಾಳಗದಲ್ಲಿ ಬಲ್ಲಿದರೆನಿಸಿದ್ದರು. ಕೆಲವರು ಸನಾದಿ ಊದುವವರು. ಯುದ್ಧಕಾಲದಲ್ಲಿಯಂತೆ ಶಾಂತತಾ ಕಾಲದಲ್ಲಿ ಈ ದೊಡ್ಡ ಪಡೆ ಯುಕ್ತ ಕಾರ್ಯ ನಿರ್ವಹಿಸುತ್ತಿತ್ತು. ಈ ಪೇಜನ ತರುವಾಯ ವಿಜಯನಗರಕ್ಕೆ ಬಂದ ನ್ಯೂನಿಸಿಜ್ ಎಂಬ ವಿದೇಶಿ ಯಾತ್ರಿಕ ಇದೇ ಸಂಗತಿಯನ್ನು ಹೆಚ್ಚು ವಿಶದವಾಗಿ ಚಿತ್ರಮಯವಾಗಿ ರೂಪಿಸಿರುವನು.

ಇದಕ್ಕೂ ಹೆಚ್ಚಿನ ಸುಸ್ಪಷ್ಟ ಚಿತ್ರಣ ನಮಗೆ ಆವಶ್ಯಕ ಎನಿಸಿದರೆ, ಪಂಜಾಬದ ಸಿಂಹನೆಂದು (೧೮೦೯--೩೯) ಹೆಸರಾದ ರಣಜಿತ ಸಿಂಗನ ಆಳಿಕೆಯ ಇತಿಹಾಸವನ್ನು ಸೂಕ್ಷ್ಮವಾಗಿ ಪರ್ಯಾಲೋಚಿಸಬೇಕು. ಡಬ್ಲ್ಯು ಎನ್ ಆಸ್ಬಾರ್ನ್ ಎಂಬ ಲಕ್ಷರಿ ಕಾರ್ಯದರ್ಶಿಯ (ಗವ್ಹರ್ನರ ಜನರಲ್ ಅರ್ಲ್ ಆಫ್ ಆಕ್ಲಂಡಿನ) ಕಾಲಕ್ಕೆ ರಣಜಿತ ಸಿಂಗನ ಆಸ್ಥಾನವನ್ನು ಸಂದರ್ಶಿಸಿದನು. ಒಂದು ದಿನ ಸಶಸ್ತ್ರ ಸ್ತ್ರೀ ಪಡೆಯು ಕೂಚುವಾಡುತ್ತ ಲಾಹೋರಿನ ಹಿರಿಬೀದಿಯಲ್ಲಿ ಹೊರಟುದುದನ್ನು ಆವನು ಕಂಡು ದಂಗುಪಡೆದು ನಿಂತ. ಸಂಗೀತದೊಡನೆ ಮದ್ದುಗುಂಡಿನ ಬಳಕೆ ಕೂಡ ಸಾಧಿಸಿದ ರಣಧೀರೆಯರು ಅವರು.

## ಅಂಗ ರಕ್ಷಕ ತಂಡ

ಸಿಖ ದೊರೆಗಳ ಲಹರಿ, ಕುಡಿಯುವ ನಾದಕ್ಕೆ ಪ್ರೇರಕರಾದ ಈ ಮಹಿಳಾ ಮಣಿಗಳ ಸಂಖ್ಯೆ ಹೇಗೊ ೧೫೦ಕ್ಕೆ ಇಳಿಯಿತು. ಮುಂದೆ ಇನ್ನೂ ಸೊರಗಿತು. ಕಾರಣ ಹೊಳೆಯದಾಗಿದೆ.

ಈ ತರುಣ ಸುರ ಸುಂದರಿಯರು ಕಾಶ್ಮೀರ, ಪರ್ಸಿಯಾ, ಪಂಜಾಬಿನಿಂದ ಬಂದವರಿರ ಬೇಕು, ಅವರ ವೇಷ ಭೂಷಗಳು ರಂಗು ರಂಗು, ಬಿಲ್ಲು ಬಾಣ ಧರಿಸಿದರು. ಆ ಅಶ್ವಾರೊಹಿಣಿಯರು ನಗರದ ರಾಜಮಾರ್ಗದಲ್ಲಿ ನಡೆದಿರುತ್ತಿದ್ದರು. ಬಹುಶಃ ಮಹಾರಾಜನಿಗೆ ರಂಜನೆ ಒದಗಿಸಲು ಈ ಪಡೆ ನಿರ್ಮಿತವಾಗಿರಲು ಸಾಕು !

ಈ ಮಹಿಳೆಯರ ದೈನಂದಿನ ಉಪಜೀವನಕ್ಕಾಗಿ ಸಣ್ಣ ಪ್ರಮಾಣದಲ್ಲಿ ವೇತನ ಸಲ್ಲಿಸಲಾಗುತ್ತಿತ್ತು. ತೀರ ಕೆಲವೇ ಜನರಿಗೆ ಮಾತ್ರ ಹಳ್ಳಿಗಳ 'ಉಂಬಳಿ' ಇದ್ದಿತ್ತು. ಅವರಲ್ಲಿ ಒಬ್ಬ ಮಹಿಳೆ ಪಥ್ಮಾ ಎಂಬುವಳು ಆಸ್ಬಾರ್ನನಿಗೆ ನಿವೇದಿಸಿದಂತೆ ಹಲವು ಹಳ್ಳಿಗಳನ್ನೇ ದತ್ತಿ ಇಲ್ಲವೇ ದೇಣಿಗೆಯಾಗಿ ಪಡೆದಿದ್ದಳಂತೆ! ಆ ಏಳು ಹಳ್ಳಿಗಳು ಕೊಂಪೆಗಳಲ್ಲ ಆದರೆ ಸಮೃದ್ಧ ಆರಸು ರಣಜಿತ ಸಿಂಗನೇ ಆಕೆಗೆ ಹಲವಾರು ಸಂದರ್ಭಗಳಲ್ಲಿ ಇವನ್ನು ಬಕ್ಷೀಸು ಎಂದು ಕೊಟ್ಟಿದ್ದನಂತೆ.

ಆಸ್ಬಾರ್ನನ ಸಂದರ್ಶನದ ಅವಧಿಯಲ್ಲಿ ಒಮ್ಮೆ ಕೋಲಾಹಲ ಎದ್ದಿತು. ಇದಕ್ಕೆ ಕಾರಣ ಕಂಪನಿಯ ಆಡಳಿತ. ಆ ಮೂಲಕ ಈ ಶಸ್ತ್ರಪಡೆ ಎಲ್ಲಿ ನಿರ್ನಾಮವಾಗುವದೋ ಎಂಬ ಭಯ ಆವರಿಸಿದ್ದಿತು. ಆದರೆ ಅದು ಸುದೈವದಿಂದ ಸುಳ್ಳಾಯಿತು. ಮತ್ತೆ ಮೊದಲಿನಂತೆ ಸ್ತ್ರೀ ಪಡೆ ತನ್ನ ರಕ್ಷಣಾ ಕಾರ್ಯದಲ್ಲಿ ನಿರತವಾಯ್ತು.

ಈ ಸುಂದರ ಮಹಿಳೆಯರ ಸಂಖ್ಯೆ ಅಷ್ಟೇನೂ ದೊಡ್ಡದಿರಲಿಲ್ಲ. ಆದರೆ ಅ ವ ರು ಯೋಧರೆನಿಸಿದ್ದರೆಂಬುದು ಗ ಣ ನೀ ಯ ಅಂಶ. ವಸ್ತು ಸ್ಥಿತಿಯೆಂದರೆ, ಈ ಗಂಡು ಭೀರೆಯರನ್ನು ಎದುರು ಹಾಕಿಕೊಳ್ಳುವ ಎದೆಗಾರಿಕೆ ರಣಜಿತ್ ಸಿಂಗನಿಗೆ ಇರಲಿಲ್ಲ.

ದೋಸ್ತ ಮಹಮ್ಮದನನ್ನಾಗಲಿ, ಬಾರಕ್ ಸಾಲನನ್ನಾಗಲಿ, ಅಫಘಾನ ಪಡೆಯನ್ನಾಗಲಿ ಇವನು ಎದುರಿಸಬಲ್ಲನಾಗಿದ್ದ. ಆದರೆ ಈ ಶಸ್ತ್ರಧಾರಿ ಮಹಿಳೆಯರನ್ನು ಎದುರಿಸುವುದು ಅವನಿಗೆ ಅಸಂಭವವಾಗಿ ಅನಿಸುತ್ತಿತ್ತು! ಈ ಸಂಗತಿಯಲ್ಲಿ ಸತ್ಯಾಂಶ ಇಲ್ಲದಿಲ್ಲ!

### ಶಿಕ್ಷಕರಿಗೆ ಸಲ್ಲದ್ದು

ಔಧವ ಅರಸನಾದ ನಾಸೀರ ಉದ್ದಿನಹೊದರ (೧೮೨೭–೩೭) ಎಂಬುವನ ಕಾಲಕ್ಕೆ ಬಂದ ವಿದೇಶಿ ಪ್ರವಾಸಿಯೊಬ್ಬನು ಆ ರಾಜ್ಯದಲ್ಲಿಯ ಸ್ತ್ರೀ ಸೈನಿಕರನ್ನು ವರ್ಣಿಸಿರುವನು. ಅವರು ಪುರುಷರಂತೆ ಲಖನೌದ ರಾಜ ವೀದಿಗಳಲ್ಲಿ ಕೂಚು ಮಾಡುತ್ತಿದ್ದರು. ಅವರ ವೇಷ ಭೂಷಣಗಳು ಸಂಪೂರ್ಣ ಲಷ್ಕರಿ ಧರ್ತಿಯವೇ ಆಗಿದ್ದವು. ಉಳಿದ ಸೈನಿಕರಿಗೂ ಇವರಿಗೂ ಅಂತರ ಎಂದರೆ, ಅವರ ತುಂಬು ಎದೆ, ಶಾರೀರಿಕ ಲಾವಣ್ಯ. ಅನಂತರ ನಿಡಿದಾದ ಹೆಳಲು ಕೂದಲು. ಅವನ್ನು ಬುಚುಡ(ಶಿಖ)ದಂತೆ ಕಟ್ಟುವ ಪರಂಪರೆ ಇದ್ದಿತು. ಅವರ ವೇಷ ಭೂಷವೆಲ್ಲ ಸರ್ವಸಾಧಾರಣ ಭಾರತೀಯ ಸೈನಿಕರಂತೆ ಇದ್ದವು. ಕಾಟ್ರಿಜ್ ಪೆಟ್ಟಿಗೆ, ಬಂದೂಕು, ಬಿಳಿಸಿಲುವಂಗಿ, ಕಾಲುಚೀಲ, ಶಿರಸ್ತ್ರಾಣ ಪಾದತ್ರಾಣ, ಚಿಲಕತ್ತು–ಇವೇ ಮೊದಲಾದವು ಅವರ ಪ್ರಮುಖ ಅಂಶಗಳು. ಅರಸನ ಸೈನ್ಯದ ಅಧಿಕಾರಿಗಳು ಅವರಿಗೆ ಕೂಚುಮಾಡುವ, ಗುರಿ ಹೊಡೆಯುವ ಶಿಕ್ಷಣವೀಯುತ್ತಿದ್ದರು. ಈ ಪಡೆಯಲ್ಲಿಯೇ ಸ್ತ್ರೀ ಕಾರ್ಪೊರಲ್ ಸಾರ್ಜಂಟರಿರುತ್ತಿದ್ದರು. ಅರಸು ಇವರ ಮುದ್ರೆಯಿಂದ ಆಗಾಗ ರಂಜಿತನಾಗುತ್ತಿದ್ದ ಸೈನಿಕರ ಎರಡು ಇಂಥ ಪ್ರತಿಗಳು ರಾಜ್ಯದಲ್ಲಿ ಇರುತ್ತಿದ್ದವು. ಈ ಸ್ತ್ರೀ ಸಿಪಾಯರನ್ನು ಅರಸು ಒಮ್ಮೆ ಬಂಡೆದ್ದ ತನ್ನ ತಾಯಿಯನ್ನೇ ಹೊರಗೆ ಹಾಕಿಸಲು ಯೋಜಿಸಿದನಂತೆ. ಈ ಯುದ್ಧದಲ್ಲಿ ಕೆಲ ಸೈನಿಕರು ಮರಣ ತೆತ್ತಬೇಕಾಯಿತು. ಪುರುಷ ಪಡೆಗಳು ಆವಶ್ಯಕತೆಯೂ ಅರಸನಿಗೆ ಇರುತ್ತಲೇ ಇತ್ತು. ಬಹುಶಃ ಮಹಿಳಾ ಪಡೆ ಅಲಂಕಾರ ಪ್ರಿಯ ಎನಿಸಬೇಕು ದೊರೆಗಳಿಗೆ. ಪುರುಷರಿಗೆ ಶಕ್ತಿಯು ಮಾನದಿಂದ ಇವರು ಸರಿದೊರೆ ಆದಾರೂ ಇಲ್ಲವೊ ಸಂಶಯ ಉಂಟಾಗಿರಬೇಕು. ಅಲ್ಲದೆ ಸ್ತ್ರೀ ಪಡೆ ಅನೀತಿಗೆ ಎಡೆಗೊಡುವವೆಂಬ ಭಯವೇನೊ ದೊರೆಗಳಿಗೆ. ಈ ಸ್ತ್ರೀಯರ ಬಗೆಗೆ ಜನರಲ್ಲಿ ಗುಜ ಗುಜ, ಕುಚು ಕುಚು ಇರುವದು ಸ್ವಾಭಾವಿಕವೆ ಸೈ! ಇದೀಗ ಶಸ್ತ್ರಧಾರಿ ಮಹಿಳಾ ಪಡೆಯ ಔಚಿತ್ಯ ಮಹತ್ವ!

(ಆಧರಿಸಿದುದು)

---

## ಹಾಸ್ಯ ಚಟಾಕಿಗಳು

ಸಾಹೇಬರಿಗೆ ಮೈಕೈ ಚೆನ್ನಾಗಿ ಬೆಳೆದಿತ್ತು. ಒಂದು ದಿನ ನಾಟಕ ನೋಡಬೇಕೆನ್ನಿಸಿತು ತಮ್ಮ ಗಾತ್ರಕ್ಕೆ ಒಂದು ಸೀಟು ಸಾಲದೆಂದೂ, ಅನನುಕೂಲವಾಗುವುದೆಂದೂ, ಎರಡು ಸೀಟುಗಳಾದರೆ ಆರಾಮವಾಗಿ ಕುಳಿತುಕೊಳ್ಳಬಹುದೆಂದೂ ಯೋಚಿಸಿದರು, ತಮ್ಮ ಜವಾನನ್ನು ಕರೆದು ಎರಡು ಸೀಟ್ ರಿಸರ್ವ್‌ಮಾಡಿಸಿ ಬರುವಂತೆ ಹೇಳಿ ಹಣ ಕೊಟ್ಟು ಕಳಿಹಿಸಿದರು. ಆದರೆ ನಾಚಿಕೆಯಿಂದಲೋ ಅಥವಾ ಮತ್ಯಾವ ಕಾರಣದಿಂದಲೋ ಸಾಹೇಬರು ಜವಾವನನಿಗೆ 2 ಸೀಟು ಬೇಕಾದುದಕ್ಕೆ ಕಾರಣವನ್ನು ತಿಳಿಸಲಿಲ್ಲ. ಸ್ವಲ್ಪ ಕಾಲದ ಮೇಲೆ ಜವಾವನನು ಹಿಂದಿರುಗಿದನು.

ಸಾಹೇಬರು:–– ಹೋಗಿದ್ಯೇನೋ ?

ಜವಾನ:–– ಹೌದು ಬುದ್ಧಿ.

ಸಾಹೇಬರು:— ಎರಡು ಸೀಟು ರಿಸರ್ವ್ ಮಾಡಿಸಿದೆಯಾ?

ಜವಾನ:–– ಹೌದು ಬುದ್ಧಿ ! ಆದರೆ ರಷ್ [ rush ] ಇದ್ದಿದ್ದರಿಂದ 1 ಸೀಟನ್ನು ಮೊದಲನೇ ಸಾಲಿನಲ್ಲಿಯೂ ಇನ್ನೊಂದನ್ನು ಮೂರನೆಯ ಸಾಲಿನಲ್ಲಿಯೂ ರಿಸರ್ವ್ ಮಾಡಿಸಿ ಬಂದೆ.

ರಾಣಿಯರೊಡನೆ ಸರಿಸಮಾನಸ್ಕಂದಳೆಯಲ್ಲಿ ಅಣುಕು ಹೋರಾಟ ನಡೆಸುತ್ತಿದ್ದರು. ಅವರು ಪುರುಷರಿಗೆ ಯಾವ ಮಾನದಲ್ಲಿಯೂ ,ಎಡ' ಅನಿಸುತ್ತಿರಲಿಲ್ಲ. ಕವಲಿನ (ಜಾವಾಯ) ರಾಣಿಯ ವಶದಲ್ಲಿದ್ದ ಮಹಿಳಾ ಪಡೆಯು ಖರ್ಚನಲ್ಲೆಗಳನ್ನು ಅತ್ಯಂತ ಕೌಶಲದಿಂದ ಬಳಸುತ್ತಿತು. ಎಂಥ ಹೋರಾಟದಲ್ಲಿಯೂ ಪುರುಷವರ್ಗದೊಡನೆ ಹಿಂದೆ ಬಿದ್ದು ಅವರು ಅರಿಯರು. ರಾಣಿಯು ಇಂಥಹ ಪರಿವಾರದಿಂದ ಶತ್ರುಗಳನ್ನು ಎದುರಿಸಿ ನಿರ್ನಾಮ ಮಾಡಿದ ನಿದರ್ಶನಗಳೂ ಅನೇಕ ಪ್ರಚಲಿತವಿವೆ.

ವಿಜಯನಗರ ದೊರೆಗಳ ಆಸ್ಥಾನದಲ್ಲಿ ಶಸ್ತ್ರಸನ್ನದ್ಧ ಮಹಿಳಾ ಸೈನ್ಯವಿದ್ದಿತು. ಕೃಷ್ಣ ದೇವರಾಯನ ಆಳಿಕೆಯಲ್ಲಿ, ೧೫೨೦ ರಿಂದ ೧೫೨೨ರವರೆಗೆ, ಅವನ ರಾಜ್ಯವನ್ನೇ ಸಂದರ್ಶಿಸಿದ ಪೇಜ್ ಎಂಬ ಪ್ರವಾಸಿಯು ಅಲ್ಲಿ ೧೨೦೦೦ ಸ್ತ್ರೀ ಸೈನಿಕರಿದ್ದರೆಂದು ಬರೆದಿಟ್ಟಿರುವನು. ಅವರಲ್ಲಿ ಹಲವರು ಕತ್ತಿವರಸೆ ಕಾರ್ಯದಲ್ಲಿ ಮುಂದುವರಿದವರು. ಕೆಲವರು ನಮಗೆ ಇಂದೂ ಅಚ್ಚರಿ ರೋಮಾಂಚಕ ಎನಿಸುವಂತೆ ಮಲ್ಲಕಾಳಗದಲ್ಲಿ ಬಲ್ಲದರೆನಿಸಿದ್ದರು. ಕೆಲವರು ಸನಾದಿ ಊದುವವರು. ಯುದ್ಧಕಾಲದಲ್ಲಿಯಂತೆ ಶಾಂತತಾ ಕಾಲದಲ್ಲಿ ಈ ದೊಡ್ಡ ಪಡೆ ಯುಕ್ತ ಕಾರ್ಯ ನಿರ್ವಹಿಸುತ್ತಿತ್ತು. ಈ ಪೇಜನ ತರುವಾಯ ವಿಜಯನಗರಕ್ಕೆ ಬಂದ ನ್ಯೂನಿಸಿಜ್ ಎಂಬ ವಿದೇಶಿ ಯಾತ್ರಿಕ ಇದೇ ಸಂಗತಿಯನ್ನು ಹೆಚ್ಚು ವಿಶದವಾಗಿ ಚಿತ್ರಮಯವಾಗಿ ರೂಪಿಸಿರುವನು.

ಇದಕ್ಕೂ ಹೆಚ್ಚಿನ ಸುಸ್ಪಷ್ಟ ಚಿತ್ರಣ ನಮಗೆ ಆವಶ್ಯಕ ಎನಿಸಿದರೆ, ಪಂಜಾಬದ ಸಿಂಹನೆಂದು (೧೮೦೯ --೩೯ ) ಹೆಸರಾದ ರಣಜಿತ ಸಿಂಗನ ಆಳಿಕೆಯ ಇತಿಹಾಸವನ್ನು ಸೂಕ್ಷ್ಮವಾಗಿ ಪರ್ಯಾಲೋಚಿಸಬೇಕು. ಡಬ್ಲ್ಯು ಎಸ್ ಆಸ್ಬಾರ್ನ್ ಎಂಬ ಲಷ್ಕರಿ ಕಾರ್ಯದರ್ಶಿಯ ( ಗವ್ಹರ್ನರ ಜನರಲ್ ಅರ್ಲ್ ಆಫ್ ಆಕ್ಲಂಡಿನ) ಕಾಲಕ್ಕೆ ರಣಜಿತ ಸಿಂಗನ ಆಸ್ಥಾನವನ್ನು ಸಂದರ್ಶಿಸಿದನು. ಒಂದು ದಿನ ಸಶಸ್ತ್ರ ಸ್ತ್ರೀ ಪಡೆಯು ಕೂಚುಮಾಡುತ್ತ ಲಾಹೋರಿನ ಹಿರಿಬೀದಿಯಲ್ಲಿ ಹೊರಟುದುದನ್ನು ಅವನು ಕಂಡು ದಂಗುಪಡೆದು ನಿಂತ. ಸಂಗೀತದೊಡನೆ ಮದ್ದುಗುಂಡಿನ ಬಳಕೆ ಕೂಡ ಸಾಧಿಸಿದ ರಣಧೀರೆಯರು ಅವರು.

### ಅಂಗ ರಕ್ಷಕ ತಂಡ

ಸಿಖ ದೊರೆಗಳ ಲಹರಿ, ಕುಡಿಯುವ ನಾದಕ್ಕೆ ಪ್ರೇರಕರಾದ ಈ ಮಹಿಳಾ ಮಣಿಗಳ ಸಂಖ್ಯೆ ಹೇಗೊ ೧೫೦ಕ್ಕೆ ಇಳಿಯಿತು. ಮುಂದೆ ಇನ್ನೂ ಸೊರಗಿತು. ಕಾರಣ ಹೊಳೆಯದಾಗಿದೆ.

ಈ ತರುಣ ಸುರ ಸುಂದರಿಯರು ಕಾಶ್ಮೀರ, ಪರ್ಷಿಯಾ, ಪಂಜಾಬಿನಿಂದ ಬಂದವರಿರ ಬೇಕು, ಅವರ ವೇಷ ಭೂಷಗಳು ರಂಗು ರಂಗು, ಬಿಲ್ಲು ಬಾಣ ಧರಿಸಿದವರು. ಆ ಅಶ್ವಾರೋಹಿಣಿಯರು ನಗರದ ರಾಜಮಾರ್ಗದಲ್ಲಿ ನಡೆದಿರುತ್ತಿದ್ದರು. ಬಹುಶಃ ಮಹಾರಾಜನಿಗೆ ರಂಜನೆ ಒದಗಿಸಲು ಈ ಪಡೆ ನಿರ್ಮಿತವಾಗಿರಲು ಸಾಕು !

ಈ ಮಹಿಳೆಯರ ದೈನಂದಿನ ಉಪಜೀವನಕ್ಕಾಗಿ ಸಣ್ಣ ಪ್ರಮಾಣದಲ್ಲಿ ವೇತನ ಸಲ್ಲಿಸಲಾಗುತ್ತಿತ್ತು. ಇತರ ಕೆಲವೇ ಜನರಿಗೆ ಮಾತ್ರ ಹಳ್ಳಿಗಳ 'ಉಂಬಳಿ' ಇದ್ದಿತ್ತು. ಅವರಲ್ಲಿ ಒಬ್ಬ ಮಹಿಳೆ ಪದ್ಮಾ ಎಂಬುವಳು ಆಸ್ಬಾರ್ನನಿಗೆ ನಿವೇದಿಸಿದಂತೆ ಹಲವು ಹಳ್ಳಿಗಳನ್ನೇ ದತ್ತಿ ಇಲ್ಲವೇ ದೇಣಿಗೆಯಾಗಿ ಪಡೆದಿದ್ದಳಂತೆ! ಆ ಏಳು ಹಳ್ಳಿಗಳು ಕೊಂಪೆಗಳಲ್ಲ ಆದರೆ ಸಮೃದ್ಧ ಅರಸು ರಣಜಿತ ಸಿಂಗನೇ ಆಕೆಗೆ ಹಲವಾರು ಸಂದರ್ಭಗಳಲ್ಲಿ ಇವನ್ನು ಬಕ್ಷೀಸು ಎಂದು ಕೊಟ್ಟಿದ್ದನಂತೆ.

ಆಸ್ಬರ್ನನ ಸಂದರ್ಶನದ ಅವಧಿಯಲ್ಲಿ ಒಮ್ಮೆ ಕೋಲಾಹಲ ಎದ್ದಿತು. ಇದಕ್ಕೆ ಕಾರಣ ಕಂಪನಿಯ ಆಡಳಿತ. ಆ ಮೂಲಕ ಈ ಶಸ್ತ್ರಪಡೆ ಎಲ್ಲಿ ನಿರ್ನಾಮವಾಗುವದೋ ಎಂಬ ಭಯ ಆವರಿಸಿದ್ದಿತು. ಆದರೆ ಅದು ಸುದೈವದಿಂದ ಸುಳ್ಳಾಯಿತು. ಮತ್ತೆ ಮೊದಲಿನಂತೆ ಸ್ತ್ರೀ ಪಡೆ ತನ್ನ ರಕ್ಷಣಾ ಕಾರ್ಯದಲ್ಲಿ ನಿರತವಾಯ್ತು.

ಈ ಸುಂದರ ಮಹಿಳೆಯರ ಸಂಖ್ಯೆ ಅಷ್ಟೇನೂ ದೊಡ್ಡದಿರಲಿಲ್ಲ. ಆದರೆ ಅವರು ಯೋಧರೆನಿಸಿದ್ದರೆಂಬುದು ಗಣನೀಯ ಅಂಶ. ವಸ್ತು ಸ್ಥಿತಿಯೆಂದರೆ, ಈ ಗಂಡು ಭೀರೆಯರನ್ನು ಎದುರು ಹಾಕಿಕೊಳ್ಳುವ ಎದೆಗಾರಿಕೆ ರಣಜಿತ್ ಸಿಂಗನಿಗೆ ಇರಲಿಲ್ಲ.

ದೋಸ್ತ ಮುಹಮ್ಮದನನ್ನಾಗಲಿ, ಬಾರಕ್ ಸಾಲನನ್ನಾಗಲಿ, ಅಫಘಾನ ಪಡೆಯನ್ನಾಗಲಿ ಇವನು ಎದುರಿಸಬಲ್ಲವನಾಗಿದ್ದ. ಆದರೆ ಈ ಶಸ್ತ್ರಧಾರಿ ಮಹಿಳೆಯರನ್ನು ಎದುರಿಸುವುದು ಅವನಿಗೆ ಅಸಂಭವವಾಗಿ ಅನಿಸುತ್ತಿತ್ತು! ಈ ಸಂಗತಿಯಲ್ಲಿ ಸತ್ಯಾಂಶ ಇಲ್ಲದಿಲ್ಲ!

### ಶಿಕ್ಷಕರಿಗೆ ಸಲ್ಲದ್ದು

ಔಧದ ಅರಸನಾದ ನಾಸೀರ ಉದ್ದಿನಹೋದರ (೧೮೨೭–೩೭) ಎಂಬುವನ ಕಾಲಕ್ಕೆ ಬಂದ ವಿದೇಶಿ ಪ್ರವಾಸಿಯೊಬ್ಬನು ಆ ರಾಜ್ಯದಲ್ಲಿಯ ಸ್ತ್ರೀ ಸೈನಿಕರನ್ನು ವರ್ಣಿಸಿರುವನು. ಅವರು ಪುರುಷರಂತೆ ಲಖನೌದ ರಾಜ ವೀದಿಗಳಲ್ಲಿ ಕೂಚು ಮಾಡುತ್ತಿದ್ದರು. ಅವರ ವೇಷ ಭೂಷಣಗಳು ಸಂಪೂರ್ಣ ಲಷ್ಕರಿ ಧರ್ತಿಯವೇ ಆಗಿದ್ದವು. ಉಳಿದ ಸೈನಿಕರಿಗೂ ಇವರಿಗೂ ಅಂತರ ಎಂದರೆ, ಅವರ ತುಂಬು ಎದೆ, ಶಾರೀರಕ ಲಾವಣ್ಯ. ಅನಂತರ ನಿಡಿದಾದ ಹೆಳಲು ಕೂದಲು. ಅವನ್ನು ಬುಚುಡ(ಶಿಖ)ದಂತೆ ಕಟ್ಟುವ ಪರಂಪರೆ ಇದ್ದಿತು. ಅವರ ವೇಷ ಭೂಷವೆಲ್ಲ ಸರ್ವಸಾಧಾರಣ ಭಾರತೀಯ ಸೈನಿಕರಂತೆ ಇದ್ದವು. ಕಾಟ್ರಿಜ್ ಪೆಟ್ಟಿಗೆ, ಬಂದೂಕು, ಬಿಳಿನಿಲುವಂಗಿ, ಕಾಲುಚೀಲ, ಶಿರಸ್ತ್ರಾಣ ಪಾದತ್ರಾಣ, ಚಿಲಕತ್ತು–ಇವೇ ಮೊದಲಾದವು ಅವರ ಪ್ರಮುಖ ಅಂಶಗಳು. ಅರಸನ ಸೈನ್ಯದ ಅಧಿಕಾರಿಗಳು ಅವರಿಗೆ ಕೂಚುಮಾಡುವ, ಗುರಿ ಹೊಡೆಯುವ ಶಿಕ್ಷಣವೀಯುತ್ತಿದ್ದರು. ಈ ಪಡೆಯಲ್ಲಿಯೆ ಸ್ತ್ರೀ ಕಾರ್ಪೊರಲ್ ಸಾರ್ಜಂಟರಿರುತ್ತಿದ್ದರು ಅರಸು ಇವರ ಮುದ್ರೆಯಿಂದ ಆಗೀಗ ರಂಜಿತನಾಗುತ್ತಿದ್ದ ಸೈನಿಕರ ಎರಡು ಇಂಥ ಪ್ರಜೆಗಳು ರಾಜ್ಯದಲ್ಲಿ ಇರುತ್ತಿದ್ದವು. ಈ ಸ್ತ್ರೀ ಸಿಪಾಯರನ್ನು ಅರಸು ಒಮ್ಮೆ ಬಂಡೆದ್ದ ತನ್ನ ತಾಯಿಯನ್ನೇ ಹೊರಗೆ ಹಾಕಿಸಲು ಯೋಜಿಸಿದನಂತೆ. ಈ ಯುದ್ಧದಲ್ಲಿ ಕೆಲ ಸೈನಿಕರು ಮತಣ ತೆತ್ತಬೇಕಾಯಿತು. ಪುರುಷ ಪಡೆಯ ಅವಶ್ಯಕತೆಯೂ ಅರಸನಿಗೆ ಇರುತ್ತಲೇ ಇದ್ದಿತು. ಬಹುಶಃ ಮಹಿಳಾ ಪಡೆ ಅಲಂಕಾರ ಪ್ರಿಯ ಎನಿಸಿರಬೇಕು ದೊರೆಗಳಿಗೆ. ಪುರುಷರಿಗೆ ಶಕ್ತಿಯು ಮಾನದಿಂದ ಇವರು ಸರಿದೊರೆ ಆದಾರೊ ಇಲ್ಲವೊ ಸಂದೇಹ ಉಂಟಾಗಿರಬೇಕು. ಅಲ್ಲದೆ ಸ್ತ್ರೀ ಪಡೆ ಅನೀತಿಗೆ ಎಡೆಗೊಡುವದೆಂಬ ಭಯವೇನೊ ದೊರೆಗಳಿಗೆ. ಈ ಸ್ತ್ರೀಯರ ಬಗೆಗೆ ಜನರಲ್ಲಿ ಗುಜ ಗುಜ, ಕುಚು ಕುಚು ಇರುವದು ಸ್ವಾಭಾವಿಕವೆ ಸೈ! ಇದೀಗ ಶಸ್ತ್ರಧಾರಿ ಮಹಿಳಾ ಪಡೆಯ ಔಚಿತ್ಯ ಮಹತ್ವ!

(ಆಧರಿಸಿದುದು)

---

# ಹಾಸ್ಯ ಚಟಾಕಿಗಳು

ಸಾಹೇಬರಿಗೆ ಮೈಕೈ ಚೆನ್ನಾಗಿ ಬೆಳೆದಿತ್ತು. ಒಂದು ದಿನ ನಾಟಕ ನೋಡಬೇಕೆನ್ನಿಸಿತು ತಮ್ಮ ಗಾತ್ರಕ್ಕೆ ಒಂದು ಸೀಟು ಸಾಲದೆಂದೂ, ಅನನುಕೂಲವಾಗುವುದೆಂದೂ, ಎರಡು ಸೀಟುಗಳಾದರೆ ಆರಾಮವಾಗಿ ಕುಳಿತುಕೊಳ್ಳಬಹುದೆಂದೂ ಯೋಚಿಸಿದರು, ತಮ್ಮ ಜವಾನನನ್ನು ಕರೆದು ಎರಡು ಸೀಟ್ ರಿಸರ್ವ್‌ಮಾಡಿಸಿ ಬರುವಂತೆ ಹೇಳಿ ಹಣ ಕೊಟ್ಟು ಕಳಿಹಿಸಿದರು. ಆದರೆ ನಾಚಿಕೆಯಿಂದಲೋ ಅಥವಾ ಮತ್ಯಾವ ಕಾರಣದಿಂದಲೋ ಸಾಹೇಬರು ಜವಾವನನಿಗೆ 2 ಸೀಟು ಬೇಕಾಮದಕ್ಕೆ ಕಾರಣವನ್ನು ತಿಳಿಸಲಿಲ್ಲ. ಸ್ವಲ್ಪ ಕಾಲದ ಮೇಲೆ ಜವಾವನನು ಹಿಂದಿರುಗಿದನು.

ಸಾಹೇಬರು:— ಹೋಗಿದ್ಯೇನೋ ?

ಜವಾನ:— ಹೌದು ಬುದ್ಧಿ.

ಸಾಹೇಬರು:— ಎರಡು ಸೀಟು ರಿಸರ್ವ್ ಮಾಡಿಸಿದೆಯಾ?

ಜವಾನ:— ಹೌದು ಬುದ್ಧಿ ! ಆದರೆ ರಷ್ [ rush ] ಇದ್ದಿದ್ದರಿಂದ 1 ಸೀಟನ್ನು ಮೊದಲನೇ ಸಾಲಿನಲ್ಲಿಯೂ ಇನ್ನೊಂದನ್ನು ಮೂರನೆಯ ಸಾಲಿನಲ್ಲಿಯೂ ರಿಸರ್ವ್ ಮಾಡಿಸಿ ಬಂದೆ.

---

# ಜನಪದ ಸಾಹಿತ್ಯದಲ್ಲಿ ಹಾಸ್ಯ

—ಎಚ್. ಎಸ್. ಸಿದ್ಧಗಂಗಪ್ಪ.

'ಹಾಸ್ಯ' ಮನುಷ್ಯನ ಮೂಲ ಪ್ರವೃತ್ತಿಗಳಲ್ಲಿ ಒಂದು. ಅದು ವ್ಯಕ್ತಿಯ ನೂರೆಂಟು ನೋವುಗಳನ್ನು ನೀಗಿ ಮನಸ್ಸಿಗೆ ಹಗುರತೆಯನ್ನು ತಂದುಕೊಡುವ ಮನರಂಜನಾ ಮಾಧ್ಯಮ. ಇಂಥ ಹಾಸ್ಯ ಮಣ್ಣಿನ ಮಕ್ಕಳ ಜೀವನದಲ್ಲಿ ಹೇಗೆ ಹಾಸುಹೊಕ್ಕಾಗಿದೆಂಬುದನ್ನು ಪ್ರಸ್ತುತ ಲೇಖಕರಿಲ್ಲಿ ನಿರೂಪಿಸಿದ್ದಾರೆ. -ಸಂ.

---

ನಮ್ಮ ಗ್ರಾಮೀಣರು ಹಗಲೆಲ್ಲ ಬೆವರು ಸುರಿಸಿ ದುಡಿಯುವ ಶ್ರಮಜೀವಿಗಳು. ದುಡಿದುಡಿದು ಮನಕೆ ಬೇಸರವಾದಾಗ ಅವರು ಸಹಜವಾಗಿಯೇ ವಿಶ್ರಾಂತಿ ಬಯಸುತ್ತಾರೆ ದುಡಿಮೆಯ ಜೀವನದಲ್ಲಿ ಅವರಿಗೆ ಮನರಂಜನೆ ತುಂಬಾ ಅಗತ್ಯ. ಆದರೆ ಅವರಿಗೆ ಇಂದು ನಗರದ ನಾಗರೀಕರಿಗೆ ಇರುವ ಚಲನಚಿತ್ರ ಮಂದಿರಗಳಾಗಲಿ ರಿಕ್ರಿಯೇಷನ್ ಕ್ಲಬ್‌ಗಳಾಗಲಿ ಮತ್ತಾವುದೇ ರೀತಿಯ ಮನರಂಜನೆಯನ್ನು ನೀಡುವಂತಹ ಸೌಲಭ್ಯಗಳಿರಲಿಲ್ಲ. ಗ್ರಾಮೀಣರು ಬೇಸತ್ತಾಗ ಒಂದಲ್ಲ ಒಂದು ರೀತಿಯಲ್ಲಿ ಮನರಂಜನೆಯನ್ನು ಪಡೆಯುತ್ತಾರೆ, ಅವರಿಗೆ ದುಡಿಮೆಯ ಜೀವನದಲ್ಲಿ ಹಾಸ್ಯವು ಒಂದು ರೀತಿಯಲ್ಲಿ ಮನರಂಜನೆ. ಇದಕ್ಕಾಗಿ ಅವರು ಮಾನಸಿಕವಾಗಿ ಹಾಗು ಭೌತಿಕವಾಗಿ ದಣಿವಾರಿಸಿಕೊಳ್ಳಲು ತಮ್ಮ ಓರಿಗೆಯವರೊಂದಿಗೆ ಜತೆಗೂಡಿ ಹಾಡುತ್ತಾರೆ ಕುಣಿಯುತ್ತಾರೆ. ಕೇಕೆ ಹಾಕುತ್ತಾರೆ. ನಡು ನಡುವೆ ಹಾಸ್ಯ ಚಟಾಕಿಗಳನ್ನು ಹಾರಿಸಿ ನಗಿಸುತ್ತಾರೆ. ಅವರೊಂದಿಗೆ ತಾವೂ ನಗುತ್ತಾರೆ. ನಕ್ಕು ಹೃದಯವನ್ನು ಹಗುರ ಮಾಡಿಕೊಳುತ್ತಾರೆ. ಹಾಸ್ಯ ವ್ಯಕ್ತಿಗೆ ನೋವನ್ನು ದಣಿವನ್ನೂ ನೀಗಿಸುವ ಸಂಜೀವಿಯಿದ್ದಂತೆ. ಹಾಸ್ಯದ ಸಂರ್ಭದಲ್ಲಿ ತಮ್ಮ ನೂರೆಂಟು ನೋವುಗಳನ್ನು ಮರೆತು ನಗುವಿನಲ್ಲಿ. ಚೈತನ್ಯವನ್ನು ತಂದುಕೊಳುತ್ತಾರೆ; ತಂಬಿಕೊಳ್ಳುತ್ತಾರೆ.

ಮಣ್ಣಿನ ಮಕ್ಕಳು ದಿನನಿತ್ಯದ ಬದುಕಿನಲ್ಲಿ ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಸಂದರ್ಭದಲ್ಲಿ ವಿನೋದ ಮಾಡುವುದನ್ನು ಕಾಣಬಹುದು. ಹುಡುಗ, ಹುಡುಗಿಯರಲ್ಲಿ ಗಂಡ ಹೆಂಡಿರಲ್ಲಿ, ಭಾವ–ನಾದನಿಯರಲ್ಲಿ ಬೀಗ–ಬೀಗರಲ್ಲಿ, ಮುದುಕ–ಮುದುಕಿಯರಲ್ಲಿ ಪ್ರಿಯ ಪ್ರೇಯಸಿಯರಲ್ಲಿ ಹಾಸ್ಯದ ಹೊನಲನ್ನೇ ಕಾಣಬಹುದು. ನಮ್ಮ ಹಳ್ಳಿಗರು ಹಾಸ್ಯವನ್ನು ಹಾಡಿನ ಮೂಲಕ ಗಾದೆ ಒಗಟುಗಳ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ ತಮಗನಿಸಿದ್ದನ್ನು ಮುಕ್ತವಾಗಿ ಹೇಳಿದ್ದಾರೆ. ಅವರ ಹೇಳಿಕೆಯಲ್ಲಿ ಸರಳತೆಯಿದೆ. ಸಹಜತೆಯಿದೆ. ಮಿಗಿಲಾಗಿ ಸೌಂದರ್ಯವಿದೆ.

ವ್ಯಕ್ತಿಯ ಬದುಕಿನಲ್ಲಿ ಪ್ರೀತಿ, ಪ್ರಣಯ, ಅನಿವಾರ್ಯ ಜೀವನಕ್ಕೆ ಅರ್ಥ ಬರಬೇಕಾದರೆ ಹಲವು ಹನ್ನೊಂದು ಮುಖಗಳ ಅನುಭವ ಬೇಕು. ಒಂದು ಕಡೆ ಹತ್ತಾರು ಜನರು ಕೆರೆಯೊಂದರ ನಿರ್ಮಾಣಕಾರ್ಯದಲ್ಲಿ ತೊಡಗಿದ್ದಾರೆ. ಅವರಲ್ಲಿ ಇಬ್ಬರು ಅವಿವಾಹಿತ ತರುಣ ತರುಣಿಯರಲ್ಲಿ ಪ್ರೇಮ ಬೆಳದಿದೆ. ದಿನಗಳೆದಂತೆ ಸುಪ್ತವಾಗಿದ್ದ ಪ್ರೇಮ ಕುಡಿಯೊಡೆದು ಪ್ರಣಯಕ್ಕೆ ದಾರಿಮಾಡಿಕೊಟ್ಟಿದೆ. ಕಣ್ಣು ಕಣ್ಣನ್ನು ಕೆಣಕಿದೆ. ಅವರಿಬ್ಬರ ಪ್ರಣಯ ವ್ಯವಹಾರದ ರೂಪದಲ್ಲಿ ಮುಂದುವರಿದಿದೆ. ಆ ತರುಣ ಹಗಲೆಲ್ಲ ಬೆವರು ಸುರಿಸಿ ದುಡಿದ ದುಡಿಮೆಯನ್ನೆಲ್ಲಾ ತನ್ನ ಪ್ರಿಯತಮೆಗೆ ಕೊಟ್ಟಿದ್ದಾನೆ. ಇದು ಬೇರಾರಿಗೂ ಗೊತ್ತಿಲ್ಲವೆಂದೇ ಭಾವಿಸಿದ್ದಾರೆ. ಆದರೆ ಇವರ ಗುಪ್ತವ್ಯವಹಾರ ಜೊತೆಯ ಕೆಲಸಗಾರರಿಗೆ ಹೇಗೋ ಗೊತ್ತಾಗುತ್ತದೆ.

ಅಷ್ಟಲ್ಲದೆ ಹೇಗೋ ಏನೋ ಈ ಹುಡುಗನ ಪ್ರಣಯ

ವ್ಯವಹಾರ ಮನೆಯವರಿಗೂ ಮುಟ್ಟಿದೆ. ಅವನ ಅತ್ತಿಗೆ ಆದೆಷ್ಟು ಮಾರ್ಮಿಕವಾಗಿ ಪ್ರಶ್ನಿಸಿದ್ದಾಳೆ ಎಂಬುದನ್ನು ನೋಡೋಣ,

" ದೊಡ್ಡಬಳ್ಳಾಪುರದ ರೋಡಿನೊಳಗೆ ಬಂಡಿ
ಹೊಡೆಯೋ ಮುದ್ದು ವೈದ ಬಂಡಿ
ಹೊಡೆದ ಬಾಡಿಗೇನಾಯ್ತೋ .
ಮಾರಾಜರುಡ್ಗ ಎತ್ತಿನಕೊಳ್ಳ ಗೆಜ್ಜೆ
ಏನಾಯ್ತೋ....

ಅತ್ತಿಗೆಯ ಮಾತಿನ ಚಾಟಿಯನ್ನು ಕೇಳಿ ತಬ್ಬಿಬ್ಬಾಗುತ್ತಾನೆ. ತನ್ನ ಪ್ರಣಯ ವ್ಯವಹಾರ ಅತ್ತಿಗೆ ಯವರಿಗೂ ಮುಟ್ಟಿದೆ, ಎಂಬುವದನ್ನು ದೃಢಪಡಿಸಿಕೊಳ್ಳು ತ್ತಾನೆ. ಮೌನದಿಂದ ಕೂಡಿದ ಮುಗುಳ್ನಗೆ ಅತ್ತಿಗೆಯ ಸಂಶಯಕ್ಕೆ ಮತ್ತಷ್ಟು ಪುಷ್ಟಿಯನ್ನು ಕೊಡುತ್ತದೆ.

ಒಮ್ಮೆ ಹೊಸದಾಗಿ ಮದುವೆಯಾದ ಅಳಿಯ ಮಾವನ ಮನೆಗೆ ದೀವಳಿಗೆ ಹಬ್ಬಕ್ಕೆಂದು ಬಂದಿದ್ದಾನೆ. ಅಳಿಯ ಬಂದುದನ್ನು ಕಂಡು ಮನೆ ಮಂದಿಗೆಲ್ಲ ಸಡಗರ. ಹಿಂದೊಮ್ಮೆ ಬಂದಾಗ ತನ್ನ ಕಿರಿಯ ತುಂಟ ನಾದುನಿಯ ಮುಂದೆ ಜಂಬಕೊಚ್ಚಿಕೊಂಡು ಮುಂದಿನ ದೀವಳಿಗೆಗೆ ಬರುವಾಗ ಸೀರೆ ತರ್ತೀನೆ, ಒಡವೆ ತರ್ತೀನೆ ಎಂದು ಒಂದು ದೊಡ್ಡ ಪಟ್ಟಿಯನ್ನೇ ಹೇಳಿರುತ್ತಾನೆ. ಆ ತುಂಟ ಹುಡುಗಿ ಭಾವನ ಮಾತನ್ನು ಪರೀಕ್ಷೆ ಮಾಡಬೇಕೆಂದು ದೀವಳಿಗೆ ಹಬ್ಬ ಬರುವುದನ್ನೇ ಕಾಯುತ್ತಿರುತ್ತಾಳೆ. ಆದರೆ ಭಾವನೋ ತಾನು ಹಿಂದೆ ಮಾತು ಕೊಟ್ಟಿದೆಲ್ಲವನ್ನು ನಾದುನಿ ಮರೆತಿರುತ್ತಾಳೆ ಎಂದು ಭಾವಿಸಿ ಧೈರ್ಯವನ್ನು ತಂದುಕೊಂಡರೂ, ಏನೆಲ್ಲಾ ಒಂದು ರೀತಿಯ ಅಳುಕು. ಅವನಿನ್ನು ಬಂದು ಒಂದರವಳಗೆ ಕಳೆದಿಲ್ಲ. ನಾದುನಿ ಆಗಲೆ ಭಾವನನ್ನು ತನಿಖೆ ಮಾಡಲಾರಂಭಿಸುತ್ತಾಳೆ. ಮೊದಲೆ ಅವಳು ತುಂಟೆ ಇನ್ನು ಕೇಳಬೇಕೆ. ಮನೆಮಂದಿಗೆಲ್ಲ ವಿಚಾರ ಗೊತ್ತಾಗವಂತೆ ತರಾಟೆಗೆ ತೆಗೆದು ಕೊಂಡಿದ್ದಾಳೆ.

" ಏನ್ರಿ ಭಾವ ಕೂತ್ಕೊಂಡ್ರಿ, ನಾನೇಳಿದೆಲ್ಲ
ಮರತ್ ಬಿಟ್ರಿ
ಬೆಂಗಳೂರ್ಗೆ ಹೋಗ್ತಿನಂತ ಹೇಳಿದ್ರಿ
ಬೆಂಗಳೂರ್ ಸೀರೆ ತರ್‍ತಿನೆಂದಿದ್ರಿ
ಬೆಂಗಳ್ಳೂರ್ಗೆ ಹೋದರೆ ಬರ್ಲೇಇಲ್ಲ ಬೆಂಗ್ಳೂರ ಸೀರೆ
ತರ್ಲೇಇಲ್ಲ.

ಎಂದು ಕೇಳಿದಾಗ ಅವನಿಗೆ ನಾಚಿಕೆಯಾಗಿ ಮುಖ ಕೆಂಪಾಗುತ್ತದೆ. ತನ್ನ ಬಂಡವಾಳವನ್ನು ಮನೆ ಮಂದಿಗೆನ ತಿಳಿಯುವಂತೆ ಮಾಡಿದಳಲ್ಲ ಎಂದು ಅವಳು ಮೇಲೆ ಹುಸಿಕೋಪ. ಕಣ್ಣಲ್ಲೇ ಸುಮ್ಮನಿರುವಂತೆ ತಿಳಿಸುತ್ತಾನೆ. ಅಷ್ಟಕ್ಕೇ ಅವಳು ಬಿಡಲಿಲ್ಲ. ಮತ್ತೊಮ್ಮೆ ಭಾವ ಸುಳ್ಳು ಹೇಳದಂತೆ ಮಾಡಬೇಕೆಂದು ಮುಂದುವರಿಯುತ್ತಾಳೆ.

ತುಮಕೂರ್ಗೆ ಹೋಗ್ತಿವೆಂತ ಹೇಳಿದ್ರಿ
ತುಂಬಿದ ಬಿಲ್ಲೆ ತರ್‍ತಿವೆಂದಿದ್ರಿ
ತುಮಕೂರ್ಗೆ ಹೋದರ ಬರ್ಲೇಲ್ಲ
ತುಂಬಿದ ಬಿಲ್ಲೆ ತರ್ಲೇ ಇಲ್ಲ.

ಎನ್ನುತಾಳೆ. ಇವಳ ತುಂಟ ಮಾತನ್ನು ಕೇಳಿ ಮನೆ ಮಂದಿಗೆಲ್ಲ ನಗುವೋ ನಗು. ಭಾವನಿಗೆ ಒಂದು ರೀತಿ ಯಲ್ಲಿ ಮುಖಭಂಗವಾದರೂ ನಾದುನಿಯ ತುಂಟತ ನಕ್ಕೆ ಮೆಚ್ಚಿ ಸಂತೋಷದಲ್ಲಿ ಅವನೂ ಭಾಗಿಯಾಗು ತ್ತಾನೆ.

ಮದುವೆಗಳಲ್ಲಿ ಹಾಸ್ಯಕ್ಕೆ ಸುಗ್ಗಿ. ಆಗ ಸರ ಸವೇ ಸಿಂಹಾಸನ. ಬೀಗ–ಬೀಗರು ಒಂದೆಡೆ ಸೇರಿದಾಗ ಅವರನ್ನು ಇವರು ಜರಿಯುತ್ತಾರೆ. ಇವರನ್ನು ಅವರು ಜರಿಯುತ್ತಾರೆ. ಈ ಕೊಡು ಕೊಳ್ಳುವಿಕೆಯಲ್ಲಿ ಮದು ವೆಗೆ ಬಂದವರಿಗೆ ಹಾಸ್ಯದ ರಸದೌತಣ, ಒಬ್ಬರಿಗೊ ಬ್ಬರ ಪೈಪೋಟಿಯಿಂದ ಜರಿಯುತ್ತ ಕುಳಿತರೆ ರಾತ್ರಿ ಕಳೆಯುತ್ತದೆ ಅವರು ಜರಿಯುವುದನ್ನು ಕೇಳಿಯೇ ಆನಂದಪಬೇಕು. ಉದಾಹರಣೆಗಾಗಿ ಒಂದೆರಡನ್ನು ನೋಡೋಣ.

ಬೀಗರು ಬಂದರು ಅಮ್ಮಮ್ಮ
ಎಂಥವರಮ್ಮ ಬೀಗ್ಯಾರು
ಲಾಡು ಮಾಡ್ತಾಗ ಬಂದಿದ್ರು
ಮಾಡಿಮ್ಯಾಲೆ ನಿಂತಿದ್ರು
ಲಾಡು ಮಾಡಿ ಇಳಕ್ಕೋದ್ರೆ
ಲಾಡಿನ್ ಬಾಂಡ್ಲಿ ನ್ಯಾಕ್ತಿದ್ರು.

# ಜನಪದ ಸಾಹಿತ್ಯದಲ್ಲಿ ಹಾಸ್ಯ

—ಹೆಚ್. ಎಸ್. ಸಿದ್ಧಗಂಗಪ್ಪ.

'ಹಾಸ್ಯ' ಮನುಷ್ಯನ ಮೂಲ ಪ್ರವೃತ್ತಿಗಳಲ್ಲಿ ಒಂದು. ಅದು ವ್ಯಕ್ತಿಯ ನೂರೆಂಟು ನೋವುಗಳನ್ನು ನೀಗಿ ಮನಸ್ಸಿಗೆ ಹಗುರತೆಯನ್ನು ತಂದುಕೊಡುವ ಮನರಂಜನಾ ಮಾಧ್ಯಮ. ಇಂಥ ಹಾಸ್ಯ ಮಣ್ಣಿನ ಮಕ್ಕಳ ಜೀವನದಲ್ಲಿ ಹೇಗೆ ಹಾಸುಹೊಕ್ಕಾಗಿದೆಂಬುದನ್ನು ಮಾನ್ಯ ಲೇಖಕರಿಲ್ಲಿ ನಿರೂಪಿಸಿದ್ದಾರೆ. -ಸಂ.

ನಮ್ಮ ಗ್ರಾಮೀಣರು ಹಗಲೆಲ್ಲ ಬೆವರು ಸುರಿಸಿ ದುಡಿಯುವ ಶ್ರಮಜೀವಿಗಳು. ದುಡಿದುಡಿದು ಮನಕೆ ಬೇಸರವಾದಾಗ ಅವರು ಸಹಜವಾಗಿಯೇ ವಿಶ್ರಾಂತಿ ಬಯಸುತ್ತಾರೆ ದುಡಿಮೆಯ ಜೀವನದಲ್ಲಿ ಅವರಿಗೆ ಮನರಂಜನೆ ತುಂಬಾ ಅಗತ್ಯ. ಆದರೆ ಅವರಿಗೆ ಇಂದು ನಗರದ ನಾಗರೀಕರಿಗೆ ಇರುವ ಚಲನಚಿತ್ರ ಮಂದಿರಗಳಾಗಲಿ ರಿಕ್ರಿಯೇಷನ್ ಕ್ಲಬ್‌ಗಳಾಗಲಿ ಮತ್ತಾವುದೇ ರೀತಿಯ ಮನರಂಜನೆಯನ್ನು ನೀಡುವಂತಹ ಸೌಲಭ್ಯಗಳಿರಲಿಲ್ಲ. ಗ್ರಾಮೀಣರು ಬೇಸತ್ತಾಗ ಒಂದಲ್ಲ ಒಂದು ರೀತಿಯಲ್ಲಿ ಮನರಂಜನೆಯನ್ನು ಪಡೆಯುತ್ತಾರೆ, ಅವರಿಗೆ ದುಡಿಮೆಯ ಜೀವನದಲ್ಲಿ ಹಾಸ್ಯವು ಒಂದು ರೀತಿಯಲ್ಲಿ ಮನರಂಜನೆ. ಇದಕ್ಕಾಗಿ ಅವರು ಮಾನಸಿಕವಾಗಿ ಹಾಗು ಭೌತಿಕವಾಗಿ ದಣಿವಾರಿಸಿಕೊಳ್ಳಲು ತಮ್ಮ ಓರಿಗೆಯವರೊಂದಿಗೆ ಜತೆಗೂಡಿ ಹಾಡುತ್ತಾರೆ ಕುಣಿಯುತ್ತಾರೆ. ಕೇಕೆ ಹಾಕುತ್ತಾರೆ. ನಡು ನಡುವೆ ಹಾಸ್ಯ ಚಟಾಕಿಗಳನ್ನು ಹಾರಿಸಿ ನಗಿಸುತ್ತಾರೆ. ಅವರೊಂದಿಗೆ ತಾವೂ ನಗುತ್ತಾರೆ ನಕ್ಕು ಹೃದಯವನ್ನು ಹಗುರ ಮಾಡಿಕೊಳುತ್ತಾರೆ. ಹಾಸ್ಯ ವ್ಯಕ್ತಿಗೆ ನೋವನ್ನು ದಣಿವನ್ನೂ ನೀಗಿಸುವ ಸಂಜೀವಿಯಿದ್ದಂತೆ. ಹಾಸ್ಯದ ಸಂಭರ್ದಲ್ಲಿ ತಮ್ಮ ನೂರೆಂಟು ನೋವುಗಳನ್ನು ಮರೆತು ನಗುವಿನಲ್ಲಿ. ಚೈತನ್ಯವನ್ನು ತಂದುಕೊಳ್ಳುತ್ತಾರೆ; ತಂಬಿಕೊಳ್ಳುತ್ತಾರೆ.

ಮಣ್ಣಿನ ಮಕ್ಕಳು ದಿನನಿತ್ಯದ ಬದುಕಿನಲ್ಲಿ ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಸಂದರ್ಭದಲ್ಲಿ ವಿನೋದ ಮಾಡುವುದನ್ನು ಕಾಣಬಹುದು. ಹುಡುಗ, ಹುಡುಗಿಯರಲ್ಲಿ ಗಂಡ-ಹೆಂಡಿರಲ್ಲಿ, ಭಾವ-ನಾದನಿಯರಲ್ಲಿ ಬೀಗ-ಬೀಗರಲ್ಲಿ, ಮುದುಕ-ಮುದುಕಿಯರಲ್ಲಿ ಪ್ರಿಯ ಪ್ರೇಯಸಿಯರಲ್ಲಿ ಹಾಸ್ಯದ ಹೊನಲನ್ನೇ ಕಾಣಬಹುದು. ನಮ್ಮ ಹಳ್ಳಿಗರು ಹಾಸ್ಯವನ್ನು ಹಾಡಿನ ಮೂಲಕ ಗಾದೆ ಒಗಟುಗಳ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ ತಮಗನಿಸಿದ್ದನ್ನು ಮುಕ್ತವಾಗಿ ಹೇಳಿದ್ದಾರೆ. ಅವರ ಹೇಳಿಕೆಯಲ್ಲಿ ಸರಳತೆಯಿದೆ. ಸಹಜತೆಯಿದೆ. ಮಿಗಿಲಾಗಿ ಸೌಂದರ್ಯವಿದೆ.

ವ್ಯಕ್ತಿಯ ಬದುಕಿನಲ್ಲಿ ಪ್ರೀತಿ, ಪ್ರಣಯ, ಅನಿವಾರ್ಯ. ಜೀವನಕ್ಕೆ ಅರ್ಥ ಬರಬೇಕಾದರೆ ಹಲವು ಹನ್ನೊಂದು ಮುಖಗಳ ಅನುಭವ ಬೇಕು. ಒಂದು ಕಡೆ ಹತ್ತಾರು ಜನರು ಕೆರೆಯೊಂದರ ನಿರ್ಮಾಣಕಾರ್ಯದಲ್ಲಿ ತೊಡಗಿದ್ದಾರೆ. ಅವರಲ್ಲಿ ಇಬ್ಬರು ಅವಿವಾಹಿತ ತರುಣ ತರುಣಿಯರಲ್ಲಿ ಪ್ರೇಮ ಬೆಳದಿದೆ. ದಿನಗಳೆದಂತೆ ಸುಪ್ತವಾಗಿದ್ದ ಪ್ರೇಮ ಕುಡಿಯೊಡೆದು ಪ್ರಣಯಕ್ಕೆ ದಾರಿಮಾಡಿಕೊಟ್ಟಿದೆ. ಕಣ್ಣು ಕಣ್ಣನ್ನು ಕೆಣಕಿವೆ. ಅವರಿಬ್ಬರ ಪ್ರಣಯ ವ್ಯವಹಾರದ ರೂಪದಲ್ಲಿ ಮುಂದುವರಿದಿದೆ. ಆ ತರುಣ ಹಗಲೆಲ್ಲ ಬೆವರು ಸುರಿಸಿ ದುಡಿದ ದುಡಿಮೆಯನ್ನೆಲ್ಲಾ ತನ್ನ ಪ್ರಿಯತಮೆಗೆ ಕೊಟ್ಟಿದ್ದಾನೆ. ಇದು ಬೇರಾರಿಗೂ ಗೊತ್ತಿಲ್ಲವೆಂದೇ ಭಾವಿಸಿದ್ದಾರೆ. ಆದರೆ ಇವರ ಗುಪ್ತವ್ಯವಹಾರ ಜೊತೆಯ ಕೆಲಸಗಾರರಿಗೆ ಹೇಗೋ ಗೊತ್ತಾಗುತ್ತದೆ.

ಅಷ್ಟಲ್ಲದೆ ಹೇಗೋ ಏನೋ ಈ ಹುಡುಗನ ಪ್ರಣಯ

ವ್ಯವಹಾರ ಮನೆಯವರಿಗೂ ಮುಟ್ಟಿದೆ. ಅವನ ಅತ್ತಿಗೆ ಅದೆಷ್ಟು ಮಾರ್ಮಿಕವಾಗಿ ಪ್ರಶ್ನಿಸಿದ್ದಾಳೆ ಎಂಬುದನ್ನು ನೋಡೋಣ,

"ದೊಡ್ಡಬಳ್ಳಾಪುರದ ರೋಡಿನೊಳಗೆ ಬಂಡಿ
ಹೊಡೆಯೋ ಮುದ್ದು ಮೈದ ಬಂಡಿ
ಹೊಡೆವ ಚಾಡಿಗೇನಾಯ್ತೋ
ಮಾರಾಜರುಡ್ಗ ಎತ್ತಿನಕೊಳ್ಳ ಗೆಜ್ಜೆ
ಏನಾಯ್ತೋ....

ಅತ್ತಿಗೆಯ ಮಾತಿನ ಚಾಟಿಯನ್ನು ಕೇಳಿ ತಬ್ಬಿಬ್ಬಾಗುತ್ತಾನೆ. ತನ್ನ ಪ್ರಣಯ ವ್ಯವಹಾರ ಅತ್ತಿಗೆಯವರಿಗೂ ಮುಟ್ಟಿದೆ, ಎಂಬುವದನ್ನು ದೃಢಪಡಿಸಿಕೊಳ್ಳುತ್ತಾನೆ. ಮೌನದಿಂದ ಕೂಡಿದ ಮುಗುಳ್ನಗೆ ಅತ್ತಿಗೆಯ ಸಂಶಯಕ್ಕೆ ಮತ್ತಷ್ಟು ತುಷ್ಟಿಯನ್ನು ಕೊಡುತ್ತದೆ.

ಒಮ್ಮೆ ಹೊಸದಾಗಿ ಮದುವೆಯಾದ ಅಳಿಯ ಮಾವನ ಮನೆಗೆ ದೀವಳಿಗೆ ಹಬ್ಬಕ್ಕೆಂದು ಬಂದಿದ್ದಾನೆ. ಅಳಿಯ ಬಂದುದನ್ನು ಕಂಡು ಮನೆ ಮಂದಿಗೆಲ್ಲ ಸಡಗರ. ಹಿಂದೊಮ್ಮೆ ಬಂದಾಗ ತನ್ನ ಕಿರಿಯ ತುಂಟ ನಾದುನಿಯ ಮುಂದೆ ಜಂಬಕೊಚ್ಚಿಕೊಂಡು ಮುಂದಿನ ದೀವಳಿಗೆಗೆ ಬರುವಾಗ ಸೀರೆ ತರ್ತೇನೆ, ಒಡವೆ ತರ್ತೇನೆ ಎಂದು ಒಂದು ದೊಡ್ಡ ಪಟ್ಟಿಯನ್ನೇ ಹೇಳಿರುತ್ತಾನೆ, ಆ ತುಂಟ ಹುಡುಗಿ ಭಾವನ ಮಾತನ್ನು ಪರೀಕ್ಷೆ ಮಾಡಬೇಕೆಂದು ದೀವಳಿಗೆ ಹಬ್ಬ ಬರುವುದನ್ನೇ ಕಾಯುತ್ತಿರುತ್ತಾಳೆ. ಆದರೆ ಭಾವನೋ ತಾನು ಹಿಂದೆ ಮಾತು ಕೊಟ್ಟಿದ್ದೆಲ್ಲವನ್ನು ನಾದುನಿ ಮರೆತಿರುತ್ತಾಳೆ ಎಂದು ಭಾವಿಸಿ ಧೈರ್ಯವನ್ನು ತಂದುಕೊಂಡರೂ, ಎನೆಲ್ಲೋ ಒಂದು ರೀತಿಯ ಅಳಕು. ಅವನಿನ್ನು ಬಂದು ಒಂದರವಳಿಗೆ ಕಳೆದಿಲ್ಲ. ನಾದುನಿ ಆಗಲೆ ಭಾವನನ್ನು ತನಿಖೆ ಮಾಡಲಾರಂಭಿಸುತ್ತಾಳೆ. ಮೊದಲೆ ಅವಳು ತುಂಟಿ ಇನ್ನು ಕೇಳಬೇಕೆ. ಮನೆಮಂದಿಗೆಲ್ಲ ವಿಚಾರ ಗೊತ್ತಾಗವಂತೆ ತರಾಟೆಗೆ ತೆಗೆದುಕೊಂಡಿದ್ದಾಳೆ.

"ಏನ್ರಿ ಭಾವ ಕೂತ್ಕೊಂಡ್ರಿ, ನಾನೇಳಿದ್ದೆಲ್ಲ ಮರತ್‌ಬಿಟ್ರಿ
ಬೆಂಗಳೂರ್ಗೆ ಹೋಗ್ತಿನೆಂತ ಹೇಳಿದ್ರಿ
ಬೆಂಗಳೂರ್ ಸೀರೆ ತರ್ತಿನೆಂದಿದ್ರಿ
ಬೆಂಗಳ್ಳೂರ್ಗೆ ಹೋದರೆ ಬರ್ಲೇಇಲ್ಲ ಬೆಂಗ್ಳೂರ ಸೀರೆ ತರ್ಲೇಇಲ್ಲ.

ಎಂದು ಕೇಳಿದಾಗ ಅವನಿಗೆ ನಾಚಿಕೆಯಾಗಿ ಮುಖ ಕೆಂಪಾಗುತ್ತದೆ. ತನ್ನ ಬಂಡವಾಳವನ್ನು ಮನೆ ಮಂದಿಗೆಲ ತಿಳಿಯುವಂತೆ ಮಾಡಿದಳಲ್ಲ ಎಂದು ಅವಳು ಮೇಲೆ ಹುಸಿಕೋಪ. ಕಣ್ಣಲ್ಲೇ ಸುಮ್ಮನಿರುವಂತೆ ತಿಳಿಸುತ್ತಾನೆ. ಅಷ್ಟಕ್ಕೇ ಅವಳು ಬಿಡಲಿಲ್ಲ. ಮತ್ತೊಮ್ಮೆ ಭಾವ ಸುಳ್ಳು ಹೇಳದಂತೆ ಮಾಡಬೇಕೆಂದು ಮುಂದುವರಿಯುತ್ತಾಳೆ.

ತುಮಕೂರ್ಗೆ ಹೋಗ್ತಿವೆಂತ ಹೇಳಿದ್ರಿ
ತುಂಬಿದ ಬಿಲ್ಲೆ ತರ್ತಿವೆಂದಿದ್ರಿ
ತುಮಕೂರ್ಗೆ ಹೋದರ ಬರ್ಲೇಲ್ಲ
ತುಂಬಿದ ಬಿಲ್ಲೆ ತರ್ಲೇ ಇಲ್ಲ.

ಎನ್ನುತಾಳೆ. ಇವಳ ತುಂಟ ಮಾತನ್ನು ಕೇಳಿ ಮನೆ ಮಂದಿಗೆಲ್ಲ ನಗುವೋ ನಗು. ಭಾವನಿಗೆ ಒಂದು ರೀತಿಯಲ್ಲಿ ಮುಖಭಂಗವಾದರೂ ನಾದುನಿಯ ತುಂಟತನಕ್ಕೆ ಮೆಚ್ಚಿ ಸಂತೋಷದಲ್ಲಿ ಅವನೂ ಭಾಗಿಯಾಗುತ್ತಾನೆ.

ಮದುವೆಗಳಲ್ಲಿ ಹಾಸ್ಯಕ್ಕೆ ಸುಗ್ಗಿ. ಅಗ ಸರಸವೇ ಸಿಂಹಾಸನ. ಬೀಗ-ಬೀಗರು ಒಂದೆಡೆ ಸೇರಿದಾಗ ಅವರನ್ನು ಇವರು ಜರಿಯುತ್ತಾರೆ. ಇವರನ್ನು ಅವರು ಜರಿಯುತ್ತಾರೆ. ಈ ಕೊಡು ಕೊಳ್ಳುವಿಕೆಯಲ್ಲಿ ಮದುವೆಗೆ ಬಂದವರಿಗೆ ಹಾಸ್ಯದ ರಸದೌತಣ, ಒಬ್ಬರಿಗೊಬ್ಬರ ಪೈಪೋಟಿಯಿಂದ ಜರಿಯುತ್ತ ಕುಳಿತರೆ ರಾತ್ರಿ ಕಳೆಯುತ್ತದೆ ಅವರು ಜರಿಯುವುದನ್ನು ಕೇಳಿಯೇ ಆನಂದಪಬೇಕು. ಉದಾಹರಣೆಗಾಗಿ ಒಂದೆರಡನ್ನು ನೋಡೋಣ.

ಬೀಗರು ಬಂದರು ಅಮ್ಮನ್ನಮ್ಮ
ಎಂಥವರಮ್ಮ ಬೀಗ್ಯಾರು
ಲಾಡು ಮಾಡ್ತಾಗ ಬಂದಿದ್ರು
ಮಾಡಿಮ್ಯಾಲೆ ನಿಂತಿದ್ರು
ಲಾಡು ಮಾಡಿ ಒಳಕ್ಹೋದ್ರೆ
ಲಾಡಿನ್ ಜಾಂಡ್ಲಿ ನ್ಯಾಕ್ತಿದ್ರು.

ಈ ಮಾತನ್ನು ಕೇಳಿದ ಬೀಗರು ಅವರನ್ನು ಅವರ ಶ್ರೀಮಂತಿಕೆಯನ್ನು ಕುರಿತು ಜರಿದು ಕುಳಿತಿದ್ದವರನ್ನು ಹೊಟ್ಟೆಹುಣ್ಣಾಗುವಂತೆ ನಗಿಸುತ್ತಾರೆ.

ಗಾಡಿ ಗಾಡಿ ಮೇಲೆ ಅಕ್ಕೀ ಮೂಟಿಂತೆ
ಬಂದ ನೆಂಟರಿಗೆಲ್ಲ ರಾಗಿ ಮುದ್ದೆಂತೆ
ಸಾಕು ಸಾಕು ಬೀಗರೆ ನಿಮ್ಮ ಮಾನ
ಬಂದ ನೆಂಟರ ಮುಂದೆ ಬರಿ ಬಡಿವಾರ.

ಹೀಗೆ ಜರಿಯುವುದು ಮುಂದುವರಿಯುತ್ತದೆ. ಇದನ್ನು ಅವರು ನಿಂದನೆಯೆಂದಾಗಲಿ, ಮಾನಸಿಕವಾಗಿ ನೋವನ್ನುಂಟು ಮಾಡುವ ಹೇಳಿಕೆಯೆಂದಾಗಲಿ ಭಾವಿಸುವುದಿಲ್ಲ. ಎಲ್ಲವನ್ನು ತೆರೆದ ಮನಸ್ಸಿನಿಂದ ಸ್ವಾಗತಿಸಿ, ಸಂತೋಷದಿಂದ ನಕ್ಕು ನಲಿಯುತ್ತಾರೆ.

ಸಾಮಾನ್ಯವಾಗಿ ಮದುವೆಗಳಲ್ಲಿ ಗಂಡಿನ ರೂಪವನ್ನು ಕಂಡು ಹಾಸ್ಯಮಾಡುವಾಗ ಹೆಣ್ಣಿನ ಕಡೆಯವರ ಮುಖ ಅರಳುತ್ತದೆ. ಗಂಡಿನ ಕಡೆಯವರು ಹೊರಗೆ ಹುಸಿಕೋಪವನ್ನು ವ್ಯಕ್ತಪಡಿಸಿದರೂ, ಅವರ ಮನದಲ್ಲಿ ನಗುವು ಅರಳುತ್ತದೆ. ಗಂಡಿನ ರೂಪವನ್ನು ಜರಿಯುವುದನ್ನು ಅವರ ಮಾತಿನಲ್ಲಿಯೇ ಕೇಳೋಣ.

ಈ ರೇ ಕಾಯಿಯಂಥ ಮೂಗು
ಸ್ವಾರೇಕಾಯಂಥ ತುಟಿ
ಈ ಕಪ್ಪ ಕರಿಯ ಗಂಡ ನೀನು ಒಪ್ಪಿದೇನಮ್ಮ
ಜಾರತುಟಿ ಬೀರೆ·ಹಲ್ಲು ನಾರಬಾಯಿ ಈ ಅಂದ
ಕಪ್ಪು ಕರಿಗಂಡನ ನೀನು ಒಪ್ಪಿದೇನಮ್ಮ.

ಎಂದು ಹೆಣ್ಣನ್ನು ಕೇಳುತ್ತಾರೆ. ಹೆಣ್ಣು ನಾಚಿಕೆಯಿಂದ ಮುಗುಳ್ನಗೆಯಲ್ಲಿಯೇ ಉತ್ತರವನ್ನು ನೀಡುತ್ತಾಳೆ.

ಅಳಿಯ ಒಮ್ಮೆ ಮಾವನ ಮನೆಗೆ ಬಂದಿದ್ದಾನೆ. ಅವನಿಗೆ ಗಿಡ್ಡಿಯಾದ ನಾದುನಿಯೊಬ್ಬಳಿರುತ್ತಾಳೆ. ತನ್ನ ಮುಂದೆ ಮೇಲಿಂದ ಬುಡಬಡನೆ ಓಡಾಡುವುದನ್ನು ಗಮನಿಸಿ ಅವಳನ್ನು ಹೀಗೆ ಗೇಲಿಮಾಡುತ್ತಾನೆ.

ಗಿಡ್ಡರು ನಡೆದರೆ ಗಿಣಿ ಹಿಂಡು ನಡೆದಾಂಗ
ಉಪ್ಪನ ಬಾಲಿ ನನ ತಂಗಿ–ನಡೆದಾರ
ರುಪ್ಪನಾ ತೇರು ಹರಿದಾಂಗ

ಆದಕ್ಕವಳು ನಗುತ್ತಾ ಭಾವ ಕಾಲ ಬಂದಾಗ ನಿನ್ನನ್ನು ಚುಡಾಯಿಸುತ್ತೇನೆ ಎನ್ನುತ್ತಾಳೆ. ಅಪರೂಪಕ್ಕೆ ಬಂದ ಅಳಿಯನನ್ನು ಸತ್ಕರಿಸಲು ಹೋಳಿಗೆ ಊಟವನ್ನು ಮಾಡಿ ಬೇಡವೆಂದರೂ ಬಿಡದೆ ಮೇಲಿಂದ ಮೇಲೆ ಬಡಿಸಿದ್ದಾರೆ. ಹೋಳಿಗೆಯನ್ನು ತಿಂದು ಹೊಟ್ಟೆಭಾರವಾಗಿ ಕೊಠಡಿಯಲ್ಲಿ ಮಲಗಿದ್ದಾನೆ ರಾತ್ರಿ ಮಲಗಿದನು ಮರುದಿನ ಮಧ್ಯಾಹ್ನವಾದರೂ ಎದ್ದಿಲ್ಲ. ಅತ್ತೆಮಾವಂದಿರು ಎಬ್ಬಿಸಿದ್ದಾರೆ, ಹೆಂಡತಿ ತಟ್ಟಿ ಎಬ್ಬಿಸಿದ್ದಾಳೆ. ಎರಡು ವರ್ಷದ ಮಗು ಮೇಲೆ ಕುಳಿತುಕೊಂಡು ಬಡಿದು ಎಬ್ಬಿಸಿದೆ. ಇಷ್ಟಾದರೂ ಅವನಿಗೆ ಎಚ್ಚರವಾಗಿಲ್ಲ. ನಾದುನಿಗೆ ವಿಚಾರ ಗೊತ್ತಾಗುತ್ತದೆ. ಮೊದಲೆ ನನಗೆ ತಿಳಿಸಿದ್ದರೆ ನಿಮಗೆ ಶ್ರಮವೇ ಆಗುತ್ತಿರಲಿಲ್ಲ. ನೋಡಿ ನಾನು ಹೇಗೆ ಎಬ್ಬಿಸುತ್ತೇನೆಂದು ಹೇಳುತ್ತಾಳೆ. ಅವಳೇನು ಅಕ್ಕನಂತೆ ತಟ್ಟಿ ಎಬ್ಬಿಸಲಿಲ್ಲ. ತನ್ನ ಹರಿತವಾದ ಮಾತಿನ ಚಾಟಿಯಿಂದ ಬಡಿದೆಬ್ಬಿಸುತ್ತಾಳೆ.

ಕೂಸು ಕುಂಚಿಗೆ ತಿಂತು ಹಾಸೀಗೆ ನೆಲತಿಂತು
ಭಾವಯ್ಯನ ಗಡ್ಡ ಇಲಿ ತಿಂತು—ಮಿಕ್ಕಿದ್ದು
ದೀವಳಿಗೆ ಮುಂದೆ ಚಿಗುರೀತು.

ಎಂದು ಹೇಳುವುದೇ ತಡ. ಹೊದಿಕೆಯನ್ನು ಕೊಡವಿಕೊಂಡು ಮೇಲೇಳುತ್ತಾನೆ. ಮನೆ ಮಂದಿಯೆಲ್ಲ ಹೊಟ್ಟೆ ಹುಣ್ಣಾಗುವಂತೆ ನಗುತ್ತಾರೆ. ಈ ವರ್ಷ ಇಲಿ ತಿಂದ ಅವನ ಗಡ್ಡ ಮುಂದಿನ ದೀವಳಿಗೆ ಚಿಗುರಬೇಕಾದರೆ ಅವನೆಂಥ ಗಂಡನಾಗಿರಬೇಕು; ಇದಕ್ಕಿಂತ ಜೋಕೆ ಹಾಸ್ಯ ಚಟಾಕಿ.

ಒಂದು ಪುಟ್ಟ ಸಂಸಾರ. ಮನೆಯ ಯಜಮಾನ ಸೋಮಾರಿ. ಇದರಿಂದ ಇದ್ದ ಆಸ್ತಿಯೂ ಕರಗಿ ಹೋಗಿದೆ. ಹೆಂಡತಿ ಎಷ್ಟು ಹೇಳಿದರೂ ಪ್ರಯೋಜನವಾಗಲಿಲ್ಲ. ಬೆಳಗಾದರೆ ತಿನ್ನುವುದು, ತಿರುಗುವುದು, ಹರಟೆ ಹೊಡೆಯುವುದು, ಇಲ್ಲವೆ ಮಲಗುವುದು. ಇದು ಅವನ ನಿತ್ಯ ಕೆಲಸ. ಇವನ ವರ್ತನೆಯನ್ನು ಕಂಡ ಅಕ್ಕಪಕ್ಕದವರು ಅವನ ಹೆಂಡತಿಯ ಮುಂದೆ ಗೇಲಿ

ಮಾಡುತ್ತಾರೆ. ಅವಳಷ್ಟೇ ಹಾಸ್ಯವಾಗಿ ಉತ್ತರವನ್ನು ನೀಡಿ ನಗಿಸುತ್ತಾಳೆ. ಅವರೊಂದಿಗೆ ತಾನು ನಕ್ಕು ಹೃದಯವನ್ನು ಹಗುರ ಮಾಡಿಕೊಳ್ಳುತ್ತಾಳೆ.

ತಿಂದೋಡಿ ನಿನ್ನ ಗಂಡ ತಿಂದೇನುಮಾಚಿಂದ
ತಿಂದೇಳು ಮನೆಯ ತಿರುಗೆಂದ- ಉಟ್ಟ ಸಿರೆ
ಉಂಗಟಕೆ ಹಾಕಿ ಹರಿಯುಂದಾ.

ಗ್ರಾಮೀಣರ ಗಾದೆಗಳ ಮೂಲಕವೂ ಹಾಸ್ಯ ಚಟಾಕಿಯನ್ನು ಹಾರಿಸುತ್ತಾರೆ. ದಿನ ನಿತ್ಯದ ಬದುಕಿನಲ್ಲಿ ಒಂದಲ್ಲ ಒಂದು ಸಂದರ್ಭದಲ್ಲಿ ಗಾದೆಗಳ ಮೂಲಕ ಹೇಳಬೇಕಾಗಿರುವ ವಿಷಯಕ್ಕೆ ಒತ್ತನ್ನು ಕೊಡುತ್ತಾರೆ. ಗೃಹಿಣಿಯೊಬ್ಬಳು ತಾನು ಬೇರೆಯವರಿಗೆ ಮಹಾಪತಿವ್ರತೆಯೆಂದು ತೋರಿಸಿಕೊಳ್ಳಬೇಕೆಂದು ಬೇರೆಯವರ ಮುಂದೆ ಗಂಡನನ್ನು ಅಪ್ಪ ಎಂದಳಂತೆ. ಹೀಗೆ ಸಹಸ್ರಾರು ಗಾದೆಗಳು ಹಾಸ್ಯವನ್ನು ಪ್ರತಿಬಿಂಬಿಸುತ್ತವೆ. ಇವು ಸರಳವಾದರೂ ವಿಶಾಲಾರ್ಥವನ್ನು ಪಡೆದುಕೊಂಡಿವೆ. ಉದಾಹರಣೆಗಾಗಿ ಒಂದೆರಡನ್ನು ನೋಡಬಹುದು.

ಅಜ್ಜ ಮದುವೆ ಎಂದರೆ ಯಾರಿಗೆ ನಂಗಾ ಎಂದನಂತೆ
ಇಣಕು ಇಣಕು ನೋಡಿದ ಒಣಕಲು ಗೌಡಿನಾ
ಕದ್ದು ಮದುವೆ ಮಾಡಿಕ್ಕೊನೀತೀ ಬಗ್ಗಿ ವಾಲಗ ಊದು
ಹನ್ನೆರಡು ವರ್ಷ ಮಲ್ಲಯುದ್ಧಭ್ಯಾಸ ಮಾಡಿ.
ಅಜ್ಜಿಯನ್ನು ಯುದ್ಧಕ್ಕೆ ಕರೆದ,
ಅಶ್ವತ್ಥ ಪ್ರದಕ್ಷಿಣೆ ಮಾಡಿದರೆ
ಮಕ್ಕಳಾಗುತ್ತವೆ ಎಂದರೆ
ಒಂದು ಸುತ್ತ ಸುತ್ತಿ ಹೊಟ್ಟೆ
ಮುಟ್ಟಿ ನೋಡಿಕೊಂಡಳಂತೆ.

ಈ ಗಾದೆಗಳನ್ನು ಕೇಳಿದಾಗ ಯಾರು ತಾನೆ ಹೊಟ್ಟೆ ಹುಣ್ಣಾಗುವಂತೆ ನಗುವುದಿಲ್ಲ.

ಕೆಲವು ಕಡೆ ಮದುವೆ ಮುಂತಾದ ವಿಶೇಷ ಸಂದರ್ಭಗಳಲ್ಲಿ ತಮ್ಮ ಬಾಳಸಂಗಾತಿಗಳ ಹೆಸರನ್ನು ಹೇಳಿಸುವುದು ವಾಡಿಕೆ. ಅದಕ್ಕವರು ನೇರವಾಗಿ ಹೆಸರನ್ನು ಹೇಳದೆ, ತಮ್ಮ ಸಂಗಾತಿಗಳ ಕೆಲವು ವಿಶಿಷ್ಟ ಗುಣಗಳೊಂದಿಗೆ ಸೇರಿಸಿ ಹೇಳಿ ಇಡೀ ವಾತಾವರಣವೇ ನಕ್ಕು ನಲಿಯುವಂತೆ ಮಾಡುತ್ತಾರೆ.

ನಾಲ್ಕಾರು ಜನ ಗೆಳತಿಯರು ಒಂದೆಡೆ ಸೇರಿದ್ದಾರೆ. ಅಡುಗೆ ವಿಚಾರ, ಸೀರೆ ವಿಚಾರ ಬರುತ್ತದೆ. ಹೀಗೆ ಹರಟೆ ಮುಂದುವರಿಯುತ್ತದೆ. ಕೊನೆಗೆ ಮದುವೆ ವಿಚಾರವೂ ಬರುತ್ತದೆ. ಅವರಲ್ಲಿ ಒಬ್ಬಳು ಒಬ್ಬ ಯುವಕನನ್ನು ಪ್ರೇಮಿಸಿದ್ದಾಳೆ. ಈ ವಿಚಾರ ಹೇಗೋ ಅವರಿಗೆ ತಿಳಿದಿರುತ್ತದೆ. ಅವಳನ್ನು ಚುಡಾಯಿಸಲು ಇದೊಂದು ಒಳ್ಳೆಯ ಸನ್ನಿವೇಶವೆಂದು ಭಾವಿಸಿ ಪ್ರಿಯಕರನ ಹೆಸರನ್ನು ಹೇಳುವಂತೆ ದುಂಬಾಲು ಬೀಳುತ್ತಾರೆ. ಒತ್ತಾಯಕ್ಕೆ ಅವಳು ಮಣಿಯಲೇ ಬೇಕಾಗುತ್ತದೆ. ನೇರವಾಗಿ ಹೆಸರನ್ನು ಹೇಳದೆ ಒಗಟಿನ ಮೂಲಕ ಹೇಳುತ್ತಾಳೆ.

ಕತ್ತೆ ಅಂತ ಬಯ್ಯುತಾನೆ
ಮತ್ತ ಮುಂಪಕ ಕರಿತಾನೆ
ಸುತ್ತ ಮುತ್ತ ನೋಡುತಾನೆ
ಮುತ್ತ ಕೊಟ್ಟು ನಗುತಾನೆ ಜಯಣ್ಣ.

ಮದುವೆಗಳಲ್ಲಿ ಸಂಗಾತಿಗಳ ಹೆಸರು ಹೇಳಿಸುವುದೆಂದರೆ ಬಲು ಹಿಗ್ಗು. ಒಮ್ಮೆ ಕೇಳಿದ ಮೇಲೆ ಮುಗಿಯಿತು. ಆದರಿಂದ ಅವರು ತಪ್ಪಿಸಿಕೊಳ್ಳುವಂತಿಲ್ಲ. ಗೃಹಸ್ಥನೊಬ್ಬ ಹೆಣ್ಣು ಮತ್ತು ಗಂಡಿನಿಂದ ತಮ್ಮ ಬಾಳ ಸಂಗಾತಿಯ ಹೆಸರನ್ನು ಹೇಳಿಸಿದ್ದಾನೆ. ಮದುವಣಿಗರೂ ಅವನ ಅಂಗಿಯನ್ನು ಹಿಡಿದು ನಿಲ್ಲಿಸಿ ಹೆಂಡತಿಯ ಹೆಸರನ್ನು ಹೇಳುವಂತೆ ಒತ್ತಾಯಿಸಿದ್ದಾರೆ. ಜೊತೆಯಲ್ಲಿಯೇ ಇದ್ದ ಹೆಂಡತಿಗೆ ನಾಚಿಕೆ. ಅವನು ಹೆಂಡತಿಯ ಒಂದೆರಡು ವಿಶೇಷ ಗುಣಗಳನ್ನು ಸೇರಿಸಿ ಹೆಸರನ್ನು ಹೇಳುತ್ತಾನೆ.

ಹೇಳಿದು ಕೇಳೂವಾಂಗಿಲ್ಲ
ತಾ ಮಾಡೂದ ಬಿಡೂವಾಂಗಿಲ್ಲ
ಮನಿಗಿ ತಂದ ಮುಚ್ಚಲ್ಲಿ ಬಡೆದರೂ
ಮಾನಗೇಡಿತನ ಬಿಟ್ಟಿಲ್ಲ ರಂಗಿ.

ಇದನ್ನು ಕೇಳಿದವರು ಬಿದ್ದು ಬಿದ್ದು ನಗುತ್ತಾರೆ. ಅವಳು ಗಂಡನಷ್ಟೇ ರಸಿಕಳು. ತನ್ನ ಗಂಡನ ಗುಣವನ್ನು ಸೇರಿಸಿ ಹೆಸರನ್ನು ಹೇಳುತ್ತಾಳೆ.

16 ನೇ ಪುಟ ನೋಡಿ

# ಬುಧಗ್ರಹ

—ಪ. ರಾಮಕೃಷ್ಣ ಶಾಸ್ತ್ರಿ.

ಬುಧಗ್ರಹ ಜ್ಯೋತಿಷ್ಯ ಶಾಸ್ತ್ರದಪ್ರಕಾರ ವಿದ್ಯಾ ಬುದ್ಧಿ ಪ್ರದಾತ. ಬುಧದೆಸೆ ಎಂದರೆ ಅದು ಉತ್ಕೃಷ್ಟ ದೆಸೆ. ಯುರೋಪಿಯನ್ನರಿಗೆ ಬುಧ 'ಸಮರ ದೇವತೆ' ರೋಮನರ ಧನಾಧಿಪತಿ. 'ಮರ್ಕ್ಯುರಿ ಎಂದರೆ ಅವನೆ. ಅಂದಾಗ ವೈಜ್ಞಾನಿಕ ದೃಷ್ಟಿಯಿಂದ..... ?

ಸೂರ್ಯನ ಪರಿಸರದ ಗ್ರಹಗಳಲ್ಲಿ ಬುಧ ಅತ್ಯಂತ ಕಿರಿಯ. ಅವನ ವ್ಯಾಸ ಚಂದ್ರನಿಗಿಂತ ಸ್ವಲ್ಪ ಜಾಸ್ತಿ–ಪೃಥ್ವಿಯ ಮೂರನೆಯ ಒಂದು ಪಾಲು –3, 100 ಮೈಲಿಗಳು.

ಸೂರ್ಯನಿಂದ ಕೊಂಚ ಮೇಲೆ, ಸಂಜೆ ಪಡು ದಿಕ್ಕಿನಲ್ಲೂ ಬೆಳಿಗ್ಗೆ ಮೂಡು ದಿಕ್ಕಿನಲ್ಲೂ ಅತ್ಯಲ್ಪ ಕಾಲ ಗೋಚರನಾಗುವ ಬುಧ, ಮೋಡ ಮಂಜುಇದ್ದರೆ ಕಾಣಿಸಲಾರ. ಅವನನ್ನು ನೋಡಲು ವ್ಯವಧಿ ಬೇಕು.

ಜೀವಮಾನದಲ್ಲೇ ಕೋಪರ್ನಿಕಸ್ ಬುಧನನ್ನು ಕಂಡಿರಲಿಲ್ಲ. ಬುಧನವರ್ಣ ಕೆಂಪು ಸೂರ್ಯನಿಗೆ ಅತಿ ಸನಿಹದಲ್ಲಿರುವ ರವಿ ಅವನಿಗೆ ಕಿರಣದಉಜ್ಜಲ ಹೊಳಪಿದೆ. ಆದರೆ ಈ ಅತಿ ಸನಿಹದಿಂದಾಗಿ ಬುಧ ಹೆಚ್ಚಾಗಿ ಅದೃಶ್ಯವಾಗಿರಬೇಕು.

ಸೂರ್ಯನಿಗೆ ಒಂದು ಸುತ್ತು ಬರಲು ಬುಧನಿಗೆ 87 ದಿವಸ, 23 ತಾಸು, 15 ನಿಮಿಷಬೇಕು. ಅವನಿಗೂ ಸೂರ್ಯನಿಗೂ ಮೂರೂವರೆ ಕೋಟಿ ಮೈಲಿ ಅಂತರವಿದೆ. ದೀರ್ಘ ಪ್ರದಕ್ಷಿಣಾ ಪಥದ ಆತ ಸೂರ್ಯನಿಗೆ ಅತಿ ದೂರವೆಂದರೆ 4, 37, 50,000 [ 28 ಡಿಗ್ರಿ ] ಮೈಲಿ ಹೋಗುತ್ತಾನೆ. ಹತ್ತಿರ ಎಂದರೆ 2, 87, 50, 000 ಮೈಲಿ ಬರಬಲ್ಲ.

ಚಂದ್ರನಂತೆಯೇ ಆತ ಸೂರ್ಯನಿಗೆ ಸದಾ ಒಂದೇ ಕಡೆ ಮುಖಹಾಕಿ ತಿರುಗುತ್ತಾನೆ. ತಿಂಗಳಿನಲ್ಲಿ ಒಂದು ಪಾರ್ಶ್ವದಿಂದ ಇನ್ನೊಂದು ಪಾರ್ಶ್ವಕ್ಕೆ ಚಲಿಸುವ ಬುಧ ಒಮ್ಮೆ ಪೂರ್ವ ಮತ್ತೊಮ್ಮೆ ಸಂಧ್ಯಾ ನಕ್ಷತ್ರವಾಗಿ ಗೋಚರಿಸುವುದರಿಂದ ಬಹುಕಾಲ ಅನೆರಡೂ ಪ್ರತ್ಯೇಕ ನಕ್ಷತ್ರಗಳೆಂಬ ಭಾವನೆಯಿತ್ತು. ಬುಧನ ಪ್ರದಕ್ಷಿಣಾ ಪಥದಲ್ಲ ಒಂದು ಭಾಗಕ್ಕೆ ಸದಾ ಬಿಸಿಲು ಬೀಳುವುದಿಲ್ಲ.

ನಮ್ಮ ಮೂರು ತಿಂಗಳು ಬುಧನಿಗೆ ಒಂದು ಸಂವತ್ಸರ, ಬುಧ ನಿವಾಸಿಗಳ ಆಯುರ್ಮಾನ ನಮ್ಮನಾಲ್ಕನೆಯ ಒಂದು ಭಾಗ ವಿದ್ದೀತು. ತುಂಬ ಹಗುರವಾದ ಬುಧನಲ್ಲಿ ಸೂರ್ಯಕಿರಣ ಬೀಳುವ ಗೋಲಾರ್ಧದಲ್ಲಿ ಏಳುನೂರ ಡಿಗ್ರಿ ಫ್ಯಾರನ್‌ಹೀಟ್ ಉಷ್ಣವಿದ್ದರೆ, ಇನ್ನೊಂದು ಗೋಲಾರ್ಧದಲ್ಲಿ 450 ·ಡಿಗ್ರಿ ಭೀಕರ ಚಳಿ. ಎರಡೂ ಅಂಶಗಳ ಮಧ್ಯೆ ಮುಚ್ಚಂಜೆಯಂತಹ ವಲಯ ಅಥವಾ ಕತ್ತಲು ಇಲ್ಲವೇ ಬಿಸಿಲು.

ಎಲ್ಲಾ ಗ್ರಹಗಳಿಗಿಂತಲೂ ಹೆಚ್ಚು ಅಂದರೆ ಪೃಥ್ವಿಯ ಮೂರನೆಯ ಒಂದು ಪಾಲು ಅಧಿಕ ಸಾಂದ್ರತೆಯಿರುವ ಬುಧನಲ್ಲಿ ಅರ್ಧಾಂಶ ಮಾತ್ರ ಗುರುತ್ವಾಕರ್ಷಣ ಶಕ್ತಿಯಿದೆ. ಬುಧಗ್ರಹವನ್ನು ಆದರಿಸಿರುವ ದಟ್ಟವಾದ ಅನಿಲದಹೊದಿಕೆ ಅವನನ್ನು ಸೂರ್ಯನ ಪ್ರಖರಾಗ್ನಿಯಿಂದ ರಕ್ಷಿಸುವುದು. ನಮಗಿಂತ ಅಲ್ಲಿ ಸೂರ್ಯ ಏಳು ಪಾಲು ದೊಡ್ಡದಾಗಿ ಕಾಣಿಸುತ್ತಾನೆ. ಪ್ರಾಯಶಃ

ಭೂಮಿಯ ನಿವಾಸಿಗಳು ಬುಧನಲ್ಲಿಗೆ ಹೋದರೆ ರಕ್ತವೇ ಕಾದು ಸಾಯಬೇಕಾದೀತು!

ಗುರುತ್ವಾಕರ್ಷವನ್ನು ನಿರೋಧಿಸಿ ಪಾರಾಗುವ ಶಕ್ತಿ ಪೃಥ್ವಿಗೆ ಸೆಕೆಂಡಿಗೆ ಏಳು ಮೈಲಿಯಿದ್ದರೆ ಬುಧನಿಗೆ 2.6 ಮೈಲಿ ಮಾತ್ರ. ಬುಧನ ಗಾತ್ರ ಚಿಕ್ಕದಾಗಿರುವುದರಿಂದ ಅವನ ನಿರ್ದಿಷ್ಟ ರೂಪ ಅನಿರ್ಧರಿತವಾಗಿದೆ

ಚಂದ್ರನಂತೆ ಬುಧನಿಗೂ ಕಲೆಗಳಿರುವುದನ್ನು ಹಳದಿನೇಳನೆಯ ಶತಮಾನದಲ್ಲಿ ಗೆಲಿಲಿಯೋ ಕಂಡು ಹಿಡಿದ. ಭೂಮಿ ಮತ್ತು ಸೂರ್ಯನ ನಡುವಣ ಅಂತರ್ಗ್ರಹವಾದ ಆತನ ಕಲೆಗಳು ಸೂಕ್ಷ್ಮ ದರ್ಶಕಕ್ಕೆ ಮಾತ್ರ ಕಾಣಿಸುತ್ತವೆ. ಅವನು ಸೂರ್ಯನಿಂದ ಆಚೆ ಇರುವಾಗಲೇ ಅವನಲ್ಲಿ ಪೌರ್ಣಮಿಯಾದುದರಿಂದ ಆಗ ಆತ ಕಾಣಿಸಲಾರ. ಭೂಮಿಗೆ ಬುಧ ಹತ್ತಿರವಾದಾಗ ಮಾತ್ರ ಕೆಲವು ಕಲೆಗಳು ಕಾಣುತ್ತವೆ.

ಗಾತ್ರ ಮತ್ತು ದ್ರವ್ಯರಾಶಿಯಲ್ಲಿ ಚಂದ್ರನನ್ನು ಹೋಲುವ ಬುಧ ಅವನಂತೆಯೇ ತನ್ನ ಮೇಲೆ ಬಿದ್ದ ಸೂರ್ಯ ಪ್ರಕಾಶದ ಏಳರಷ್ಟನ್ನು ಪ್ರತಿಫಲಿಸುತ್ತಾನೆ. ಆತ ಹಿಂದೆ ಶುಕ್ರಗ್ರಹದ ಉಪಗ್ರಹವಾಗಿರಬಹುದೆಂದೂ ಸೂರ್ಯನ, ಆಕರ್ಷಣೆಯಿಂದುತ್ಪನ್ನವಾಗುವ ತೆರೆಗಳ ಹೊಡೆತದಿಂದ ಬೇರ್ಪಟ್ಟಿರಬಹುದೆಂದೂ ಹೇಳುವ ತಾರ್ಕಿಕ ವಿಜ್ಞಾನಿಗಳು ಚಂದ್ರನಿಗೂ ಇದೇ ಗತಿ ಬಂದೀತೆಂದು ನಿರೀಕ್ಷಿಸಿದ್ದಾರೆ. ಬುಧ ಕಕ್ಷ್ಯೆಯು ಪೃಥ್ವಿಯದರಲ್ಲ ವಿಲೀನವಾಗಿದ್ದು ದೀರ್ಘ ವೃತ್ತಾಕಾರ [ Ellipse ] ಆಗಿದೆ. ಅವನ ಘನಫಲ ಪೃಥ್ವಿಯ ಇಪ್ಪತ್ತರಲ್ಲೊಂದು ಭಾಗ.

ಬುಧನ ಅಂಡಾಕಾರದ ಚಲನ ಪಥದಲ್ಲಿ ಒಂದು ನೀಚದಿಂದ ಇನ್ನೊಂದು ನೀಚ ಸೇರುವಾಗ ಪೂರ್ಣ ಸುತ್ತಗಿಂತ ಸ್ವಲ್ಪ ಜಾಸ್ತಿ ಚಲಿಸುವುದರಿಂದ ನೂರು ವರ್ಷಗಳಲ್ಲಿ 43 ಸೆಕೆಂಡು ವ್ಯತ್ಯಾಸ ಬರುತ್ತದೆ.

ಭೂಮಿ, ಸೂರ್ಯರ ಮಧ್ಯ ಒಂದೇ ರೇಖೆಯಲ್ಲಿ ಬುಧ ಇದ್ದಾಗ, ಬುಧ ಸೂರ್ಯನಿಗೆ ಇದಿರಾಗಿ ಬರುತ್ತಾನೆ. ಇದಕ್ಕೆ 'ಸಂಕ್ರಮ, ಎನ್ನುತ್ತಾರೆ. ಈ ರೀತಿ ಶುಕ್ರನಿಗೆ 1882ರಲ್ಲಿ ಸಂಕ್ರಮವಾಗಿದ್ದರೆ, ಅದು ಇನ್ನು ಆಗುವುದು 2004ರಲ್ಲಿ. ಸಂಕ್ರಮ ಎಂದರೆ ಗ್ರಹಣವೇ ಆಗ ಬುಧನು ಕರಿಯ ಚುಕ್ಕಿಯಂತೆ ಕಾಣುತ್ತಾನೆ.

ಪೃಥ್ವಿಗೆ ಶುಕ್ರ ಮತ್ತು ಬುಧ ಸಂಕ್ರಮ ಮಾತ್ರ ಗೋಚರಿಸುತ್ತದೆ. 189 ನೇ ಮೇ 10, 1894 ನೆಯ ನವೆಂಬರ್ 10, 1907ನೆಯ ನವೆಂಬರ್ 12, 1914 ನೆಯ ನವೆಂಬರ್ 6, 924 ಮೇ 12, 1927 ನೇ ನವೆಂಬರ್ 8 ರಲ್ಲೂ ಸ್ಪಷ್ಟ ಬುಧಸಂಕ್ರಮ ಗೋಚರಿಸಿತು. ಈ ಸಂಕ್ರಮ ಮೇ ಹಾಗೂ ನವೆಂಬರದಲ್ಲಿಮಾತ್ರ ಆಗಲು ಕಾರಣವೆಂದರೆ ಆ ತಿಂಗಳಿನಲ್ಲಷ್ಟೇ ಬುಧ ಪಥದ ಸಂಪಾತ ರೇಖೆಗಳು ಸೂರ್ಯನ ಕ್ರಾಂತಿವೃತ್ತವನ್ನು ಭೇದಿಸುವಲ್ಲಿ ಪೃಥ್ವಿ ಬಂದು ಸೇರುತ್ತದೆ.

1969 ನೇ ಮೇ ತಿಂಗಳ ಏಳೂಮುಕ್ಕಾಲು ಘಂಟೆಯ ಬುಧ ಸಂಕ್ರಮ ಈ ಶತಮಾನದಲ್ಲೇ ದೀರ್ಘ. 1960 ನವೆಂಬರ್ 7ರ ಸಂಕ್ರಮ ನಮ್ಮ ದೇಶಕ್ಕೆ ಕಾಣಿಸಲಿಲ್ಲ. ಈ ಸಂಕ್ರಮ ಕ್ರಮಾಶಃ 13, 7, 10, ವರ್ಷಗಳ ಅಂತರದಲ್ಲಾಗುತ್ತದೆ. ಬುಧ ಸಂಕ್ರಮದ ಪರಮಾವಧಿ ವೇಳಾ ಮಿತಿಯ 9 ತಾಸುಗಳ ಸಂಕ್ರಮ 1973 ರ ನವೆಂಬರ್ 10 ರಂದು ಆಗಿದೆ. ಇನ್ನು 1986 ರ ವರೆಗೆ ಇಲ್ಲ. —

---

14 ನೇ ಪುಟ ದಿಂದ

ಹಸಿಹಾಲ ಬಿಸಿ ಅನ್ನ
ಬಾಳೆಎಲೆ ಪದರ ಮ್ಯಾಲೆ
ಉಪ್ಪಾವ ಬಲ ಚುರಕು ಗುಂಡಪ್ಪನ್ನೋರು.

ಜೀವನದಲ್ಲಿ ನಕ್ಕು ನಲಿವುದಕ್ಕಿಂತ ಮತ್ತೇನು ಬೇಕು. ಹೀಗೆ ನಮ್ಮ ಗ್ರಾಮೀಣರು ಸಮಯ ಸಿಕ್ಕಾಗ ಬೇಸರವಾದಾಗ ಒಂದೆಡೆ ಸೇರಿ ವಿನೋದವಾಗಿ ಕಾಲ ಕಳೆಯುತ್ತಾರೆ. ವ್ಯಕ್ತಿಗಳು ದಾರಿತಪ್ಪಿದಾಗ ಅವರಿಗೆ ನೋವಾಗದಂತೆ ಹಾಸ್ಯದ ಮೂಲಕ ವಿಡಂಬನೆ ಮಾಡಿ ತಮ್ಮ ತಪ್ಪನ್ನು ತಿದ್ದಿಕೊಂಡು ಉತ್ತಮ ಮಾರ್ಗದಲ್ಲಿ ನಡೆಯುವಂತೆ ಮಾಡುತ್ತಾರೆ.

ಕಾವ್ಯವಾಹಿನಿ

# ತಾಯಿ-ತಂದೆ



—ಕೆ.ಎಸ್. ಷಡಕ್ಷರಿ

ತಾಯಿ ತಂದೆಗಳ ಸೇವೆಯ ಮಾಡಿರೋ ಅಣ್ಣಗಳಿರಾ
ಅವರು ಪ್ರತ್ಯಕ್ಷ ದೇವರುಗಳು – ನೀವುಕಾಣಿರಾ?||

ದೇವರು ದೇವರೆಂದೆಲ್ಲಾ ಏಕೆ ಎಲ್ಲ ಸುತ್ತುವಿರಿ,
ಮನೆಯಲ್ಲಿರುವ ದೇವರುಗಳೆ ಸಾಕು ಅರಿಯಿರಿ,
ಏಕೆ, ಅಳಿದುಳಿದ ಗುಡಿಗೋಪುರಗಳಿಗೆ ವ್ಯರ್ಥತಿರುಗುವಿರಿ
ಮನೆಯೆಂಬ ಗುಡಿಯ ಬಿಟ್ಟು ಅಲ್ಲಿಗೆ ಹೋಗುವಿರಿ ||೧||

ಗುಡಿಗೋಪುರಗಳಾಗಿಹುವು ಕಲ್ಲುಮಣ್ಣುಗಳಿಂದ
ಮನೆಯೆಂಬ ಗುಡಿಯು ಆಗಿಹುದು ಪ್ರತ್ಯಕ್ಷ ದೇವರಿಂದ
ಎಷ್ಟು ಪೂಜಿಸಿದರೂ ದೊರೆಯದು ಮುಕ್ತಿ ಕಲ್ಲುದೇವರಿಂದ
ಸಿಗುವುದದು ತಾಯಿತಂದೆಗಳ ಭಕುತಿ ಸೇವೆಯಿಂದ||೨||

ಎಷ್ಟು ದುಡಿದರೇನು ಫಲ, ಈ ಮನುಜ ಜನ್ಮ
ಅದರಿಂದ ಸಿಗಲಾರದು ಮುಕ್ತಿಯೂ ಮರ್ಮ
ತಾಯಿ ತಂದೆಗಳ ಸೇವೆ ಮಾಡುವುದು ನಮ್ಮಯಾ ಧರ್ಮ
ಇದು ಮನ-ಕುಲದ ಪ್ರಪ್ರಥಮ ಕರ್ಮ ||೩||

ಏನು ಪದವಿಗಳ ಪಡೆದರೇನು ಬಂತು ಫಲ,
ತಾಯಿ ತಂದೆಗಳ ಸೇವೆಯ ಬಿಟ್ಟರೆ ಎಲ್ಲವೂ ನಿಷ್ಫಲ
ಅವರ ಹರಸಿಕೆಯೆ ಮನಕುಲದ ರಕ್ಷಣೆಗೆ ಅಶ್ವಬಲ
ಅವರ ಸೇವೆಯಿಂದಮಗೆ ದೊರೆವುದು ಸತ್ಫಲ ||೪||

ಅದಕಾಗಿ, ತಾಯಿತಂದೆಗಳ ಸೇವೆಯ ಮಾಡಿರೋ
ಅಣ್ಣಗಳಿರಾ, ಅವರು ಪ್ರತ್ಯಕ್ಷ ದೇವರು ನೀವು ಕಾಣಿರಾ? ||

# ಕಾನೂನು ಕತ್ತೆ

ಸಿ. ವಿ. ವಿಶ್ವನಾಥಯ್ಯ

ಜನಜೀವನದ ಕಡ್ಡಾಯ ಕರೆನ್ಸಿ
ಬಾಳುಬದುಕಿನ ಸಿಪ್ಪೆಗಳೆದು,
ಹಾಸು, ಹೊಕ್ಕಾಗಿ ಬೆಳೆದುಬಂದ
ಬಣ್ಣ ಬಣ್ಣದ ತೇಪೆ ಹಚ್ಚಿದ ಕೌದಿ,
ಅವತಾರ ನೂರಾರು, ಸಮಯ ಸಾಧಕ ಕಲೆ,
ಇಕ್ಕೆಡೆ ಕತ್ತರಿಸುವ ಹಜಾಮತಿ ಅಲಗು
ಹಳೆ ಚಿಗುರು ಹೊಸಬೇರು ವಿಚಿತ್ರಬೆಳೆ
ಪರಿಹಾರ, ನೀಡಿಕೆ, ಬೇಡಿಕೆ, ಗೌರವ,
ಕೊಡಿಸುವದಲ್ಲಾಳಿ ಲಾಯರ್
ಪಾಂಡಿತ್ಯ ಬಿರುದಿನ ತಾಳಿಕಟ್ಟಿ
ನಿಜಸುಳ್ಳು, ಸುಳ್ಳುನಿಜವಾದ
ಹೋರಾಟದ ಸುರುತಗೂಳಿ,
ಮಾತಿನ ಕಾಳಗಕ್ಕೆ ಕೊಡುವ ದಲ್ಲಾಳಿ, ಪೀಜು
ಕಕ್ಷಿಗಾರನ ಸುಲಿಗೆಯ ಸುಗ್ಗಿ
ಗಾವಿಗೆ ಜಿಗಿಯಲು ತಂದಮರಿ
ಗೆದ್ದವ ಸೋತ, ಸೋತವ ಸತ್ತ,
ಪರಿಹಾರ ಭಿಕ್ಷೆ ಪರಿಣಾಮ
ನ್ಯಾಯ ನ್ಯಾಯಕ್ಕಾಗಿ, ಬುದ್ಧಿ ಜೀವಿಗಳ
ಶ್ರಮದಾನ ಮೌಲ್ಯ ಸಾಧನ ಗತಕಾಲ ಸಂಪತ್ತು
ಈ ಹೊತ್ತು ಎತ್ತು, ಎಮ್ಮೆ, ಕತ್ತೆಯಂತೆ
ಕಿಮ್ಮತ್ತು ನೈತಿಕ ಅರಕಳಿ ಸೊತ್ತು
ತಪ್ಪು ಸುಡಿ, ವಾದ, ತೀರ್ಪುತಪ್ಪಲ್ಲ ( ವೇ )
ವಿಧಿ, ವಿಧಿ ವಿನಾಯಿತಿ ಒಂದುವರ ಇದಕೆಲ್ಲ
ಆಧಾರ ಒಂದೇ, ನಿರ್ಧಾರ ಬೇರೆ ಬೇರೆ,
ಬಿಡಿಸಲಾಗದ ಒಗಟು ಬಲು ಜಿಗಟು
ಸಮಾಜ ವಿಜ್ಞಾನ ಸೋಲು,
ಸಹಜ ನ್ಯಾಯ ಬಾಳಿ ಬದುಕಲಾರದ,
ಠಕ್ಕು, ಪಕ್ಷಪಾತ ಸ್ವಾರ್ಥಸಾಗರ,
ಕಾನೂನು ಕತ್ತೆಯೇ ? ಕತ್ತೆಯ ಕಾನೂನೆ?
ನಾಲ್ಕತ್ತುವರ್ಷ ಬೆನ್ನುಹತ್ತಿದ ನಾನೊಂದು ಮರಿಕತ್ತೆ
ಬದಲ ಕಾಣದ ಅನಿವಾರ್ಯ ಬಂಧನ – ಈಕಾನೂನು.

# ಸುಖವೆಲ್ಲಿದೆ?

—ಟಿ. ಚಂದ್ರರಾಜಶೆಟ್ಟಿ.

ಸಂಸಾರ ಮತ್ತು ಸಸಾರ ಈ ಎರಡು ಶಬ್ದಗಳಲ್ಲಿ ಸೊನ್ನೆ ಒಂದು ವ್ಯತ್ಯಾಸವಾಗಿ ಕಾಣುತ್ತದೆ ಶಬ್ದ ದೃಷ್ಟಿಯಿಂದ. ಅರ್ಥ ದೃಷ್ಟಿಯಿಂದ ಸಂಸಾರ ಸಸಾರವಾದಾಗ ಸುಖದ ದಾರಿ ಹತ್ತಿರವಾಗುತ್ತದೆ. ಎನ್ನುತಾರೆ ಹಾಗಾದರೆ ಇದನ್ನು ಓದಿನೋಡಿ--

---

ಜಗತ್ತಿನಲ್ಲಿರುವ ಪ್ರತಿಯೊಂದು ಪ್ರಾಣಿಯೂ ಸುಖವನ್ನು ಅಪೇಕ್ಷಿಸುತ್ತದೆ. ಆದರೆ, ನಿಜವಾದ ಸುಖದ ಸ್ಥಾನವು ಎಲ್ಲಿದೆ? ಎಂಬುದನ್ನು ತನ್ನ ಜ್ಞಾನದಿಂದ ತಿಳಿದುಕೊಂಡು, ಅದರ ಪ್ರಾಪ್ತಿಗಾಗಿ ಪ್ರಯತ್ನಿಸುವ ಸುಜ್ಞಾನವು ಮನುಷ್ಯನಿಗೆ ಮಾತ್ರ ಲಭ್ಯವಾಗಿದೆ. ಹಲವು ಸಂತರು, ಜ್ಞಾನಿಗಳು ಮೊದಲಾದವರೆಲ್ಲ, ಮನುಷ್ಯ ಜನ್ಮವು ದುರ್ಲಭವೆಂದು ಸಾರಿದ್ದಾರೆ. ಇಂತಹ ದುರ್ಲಭವಾದ ಜನ್ಮವನ್ನು ವ್ಯರ್ಥವಾಗಿ ಕಳೆದುಕೊಳ್ಳದೆ, ನಮಗೆ ಇನ್ನೂ ಉತ್ತಮವಾದ ಸ್ಥಾನವು ಸಿಗುವಂತೆ ಪ್ರಯತ್ನಿಸುವುದು ಪ್ರತಿಯೊಬ್ಬನ ಕರ್ತವ್ಯ.

ಮಾನವನ ಅಂತ್ಯದ ಗುರಿಯು ಮೋಕ್ಷವೆಂದು ಕೆಲವು ಮತ ತತ್ವಗಳು ಸಾರಿದರೆ,ದೇವಾದಿ ದೇವನಲ್ಲಿ ನಮ್ಮ ಆತ್ಮವು ಲೀನವಾಗುವುದೇ ಅಂತರಾತ್ಮನ ಗುರಿಯೊಂದು ಬೇರೆ ಕೆಲವು ಮತಗಳು ಸಾರಬಹುದು, ಅದು ಹೇಗಿದ್ದರೂ ಮಾನವ ಜನ್ಮವೇ ನಮ್ಮ ಅಂತ್ಯದ ಗುರಿಯಲ್ಲವೆಂದೂ, ಇದಕ್ಕಿಂತಲೂ ಉತ್ತಮವಾದ ಬೇರೊಂದು ಸ್ಥಾನವು, ಈ ಆತ್ಮನಿಗೆ ಸಾಧಿಸಲು ಸಾಧ್ಯವಿದೆಯೆಂದೂ ಎಲ್ಲಾ ಮತಗಳು ಸಾರುತ್ತವೆ, ಮದ, ಮಾತ್ಸರ್ಯ, ಕಾಮ, ಕ್ರೋಧಾದಿ ದೋಷರಹಿತನೂ, ನಿರ್ವಿಕಾರನೂ, ಸರ್ವಜ್ಞನೂ ಆಗುವಂತೆ ನಮ್ಮ ಅಂತರಾತ್ಮನನ್ನು ಕೂಡಾ ರೂಪಿಸಬಹುದೆಂದು ಸಕಲ ಶಾಸ್ತ್ರಗಳು ಸಾರುತ್ತವೆ.

ಆತ್ಮೋನ್ನತಿಯ ಮಾರ್ಗವು ಒಂದೊಂದು ಮತದಲ್ಲಿ ಒಂದೊಂದು ರೀತಿಯಾಗಿ ವರ್ಣಿಸಲ್ಪಟ್ಟಿದ್ದರೂ, ಶುಭ ಭಾವನೆಯಿಂದ ಕೂಡಿ, ಧರ್ಮ ಮಾರ್ಗದಿಂದ ನಡೆಯುತ್ತಿದ್ದವನಿಗೆ ಮಾತ್ರ ಅದು ಸಾಧ್ಯ ಎಂಬುದನ್ನು ನಾವು ಮರೆಯ ಬಾರದು. ನಮ್ಮ ನರಜನ್ಮಕಿಂತ ಶ್ರೇಷ್ಠವಾದ ಪದವಿಯನ್ನು ನಾವು ಪಡೆಯಬೇಕಾದರೆ, ನಮ್ಮ ಮನಸ್ಸನ್ನು ಸದಾ ನಿರ್ಮಲವಾಗಿಟ್ಟುಕೊಂಡು, ಅದು ಯಾವಾಗಲೂ ಉತ್ತಮವಾದ ಕೆಲಸಗಳಲ್ಲಿಯೇ ನಿರತವಾಗಿರುವಂತೆ ಪ್ರಯತ್ನಿಸ ಬೇಕು. ಕಳಂಕರಹಿತವಾದ ಮನಸ್ಸಿನಿಂದಲೇ ನಾವು ನಿತ್ಯ ಸುಖಿಗಳಾಗಲು ಸಾಧ್ಯ. ಅದೇ ಮಾತನ್ನು ಪ್ರಾಜ್ಞರು "ಭಾವನಾ ಭವ ನಾಶಿನೀ" ಅಂದಿದ್ದಾರೆ.

ನಮ್ಮ ಮನಸ್ಸು ಸದಾನಿರ್ಮಲವಾಗಿರ ಬೇಕಾದರೆ, ನಾವು ಅದನ್ನು ಕಂಡ ಕಡೆಗೆ ಚಲಿಸದಂತೆ ಹತೋಟಿಯಲ್ಲಿಡ ಬೇಕಾದುದು ಮುಖ್ಯ, ಮನಸ್ಸು ನಮ್ಮ ಅಂಕೆಯಲ್ಲಿ ನಿಲ್ಲ ಬೇಕಾದರೆ, ಅದನ್ನು ಒಂದೆಡೆಯಲ್ಲಿ ಕೇಂದ್ರೀಕರಿಸ ಬೇಕು. ಮನಸ್ಸನ್ನು ಶಾಂತವಾಗಿಟ್ಟುಕೊಂಡು ದಿನದ ಹೆಚ್ಚಿನ ಸಮಯವನ್ನು ಕಳೆಯ ಬೇಕಾದರೆ ನಾವು ಅದನ್ನು ದೇವರ ಪೂಜೆ, ಭಜನೆ. ಧ್ಯಾನಗಳಲ್ಲಿ ಕಳೆಯ ಬೇಕು. ಕವಿಯು ಹರಿಶ್ಚಂದ್ರ ಕಾವ್ಯದಲ್ಲಿ ದೇವರನ್ನು ಸ್ತುತಿಸಿದ ರೀತಿಯನ್ನು ನೋಡಿರಿ—

ನಿರುಪಮ ನಿರಾಲಂಬ ನಿತ್ಯ ನಿರ್ಭಯ ನಿರಾ
ವರಣ ನಿರ್ಮಾಯ ನಿರ್ಮಳ ನಿರ್ವಿಕಲ್ಪ ನಿಜ
ನಿರಸೂಯ ನಿಶ್ಚಿಂತ ನಿರ್ಲೇಪ ನಿರ್ಗುಣ ನಿರಾಧಾರ ನಿತ್ಯತೃಪ್ತ।
ನಿರವದ್ಯ ನಿರ್ಭಿನ್ನ ನಿರ್ದ್ವಂದ್ವ ನಿರ್ದೋಷ
ನಿರಪೇಕ್ಷ ನಿಷ್ಕಾಮಿ ನಿಷ್ಕಳ ನಿರಾಕಾರ
ನಿರಜ ನಿರಹಂಕಾರ ನಿರ್ಮಳ ನಿರಾಳ ಪಂಪಾವಿರೂಪಾಕ್ಷ ಶರಣು॥

ಪ್ರತಿಯೊಂದು ಮತವೂ ದೇವರ ಅಸ್ಥಿತ್ವವನ್ನು ಒಪ್ಪುತ್ತವಾದರೂ, ಕೆಲವು ಮತಗಳು ಮೂರ್ತಿ ಪೂಜೆಯನ್ನು ಒಪ್ಪುವುದಿಲ್ಲ: ರಾಜರ, ರಾಜಕಾರಿಣಿಗಳ ಅಥವಾ ನಮ್ಮ ಹಿರಿಯರ ಭಾವ ಚಿತ್ರಗಳನ್ನು ನಾವು ನಮ್ಮ ಮನೆಯ ಗೋಡೆಯಲ್ಲಿ ತೂಗು ಹಾಕುತ್ತೇವೆ. ಅವನ್ನು ನೋಡಿದಾಕ್ಷಣ ಆ ಚಿತ್ರದಲ್ಲಿರುವವರ ನೆನಪು ನಮಗಾಗುತ್ತದೆ, ಅದೇ ರೀತಿಯಲ್ಲಿ ದೇವರ ಮೂರ್ತಿಯನ್ನು ಕಂಡಾಕ್ಷಣ- ನಮ್ಮ ಮನಸ್ಸಿನ ದುರ್ಭಾವನೆಗಳೆಲ್ಲ ದೂರವಾಗಿ ಅದು ನಿರ್ಮಲವಾಗುತ್ತದೆ. ಕಳ್ಳು ಕುಡಿದ ಮರ್ಕಟನಂತೆ ಸದಾ ಕಂಡ ಕಡೆಗೆ ಹರಿಯುತ್ತಿರುವ ಮನಸ್ಸನ್ನು ಅಂಕೆಯಲ್ಲಿಟ್ಟು ಕೊಳ್ಳಲು ಮೂರ್ತಿ ಪೂಜೆಯಷ್ಟು ಸುಲಭವಾದ ಸಾಧನವು ಬೇರಿಲ್ಲ.

ಜಗತ್ತಿನ ಕಷ್ಟ ಕೋಟಲೆಗಳಿಗೆಲ್ಲ ನಮ್ಮ ಮನಸ್ಸೇ ಕಾರಣವೆಂಬದನ್ನು, ನಾವು ಆಳವಾಗಿ ವಿಚಾರಿಸಿದರೆ ನಮಗೆ ತಿಳಿದು ಬರುವುದು. ಬೇರೊಬ್ಬನಲ್ಲಿದ್ದ ಸೌಭಾಗ್ಯವು ನಮ್ಮದಾಗಬೇಕು; ಉಳಿದವರಿಗಿಂತ ತಾನು ಶ್ರೇಷ್ಠನೆಂದು ತಿಳಿಯಬೇಕು ಎಂದು ತಿಳಿಯುವವರೇ ಹೆಚ್ಚು ಮಂದಿ ಇರುವ ಈ ಜಗತ್ತಿನಲ್ಲಿ, ಕಷ್ಟಕೋಟಲೆಗಳು ತುಂಬಿ ಕೊಂಡಿರುವುದೊಂದು ಆಶ್ಚರ್ಯವಲ್ಲ. ನಾವು ಶೇಖರಿಸುತ್ತಿರುವ ವಸ್ತುಗತಿಗಳಲ್ಲಿ ಮಿತಿಯನ್ನಿರಿಸಿ ಕೊಳ್ಳಬೇಕು. ನಮಗೆ ಅಗತ್ಯವಿಲ್ಲದ ಯಾವ ವಸ್ತುವೂ ನಮ್ಮ ಬಳಿಯಲ್ಲಿರ ಬಾರದು. ನಮ್ಮ ಅಗತ್ಯಗಳಿಗಿಂತ ಹೆಚ್ಚಿನ ಸ್ತುಗಳನ್ನು ನಾವು, ಅವುಗಳ ಅಗತ್ಯವಿರುವವರಿಗೆ ದಾನ ಮಾಡಬೇಕು. ಒಂಟಿಯಾಗಿ ಈ ಭೂಮಿಯ ಮೇಲೆ ಜನನಕ್ಕೆ ಬಂದು ನಾವು, ಇಲ್ಲಿ ನಾಲ್ಕು ದಿನದ ಬಾಳ್ವೆ ಮಾಡುತ್ತಿರುವಾಗ ಮಾತ್ರ, ಹೆಂಡತಿ–ಮಕ್ಕಳು ಎಂದೆಂದುಕೊಂಡು ಅವರ ಮೇಲ್ಮೆಯನ್ನೇ ಚಿಂತಿಸುತ್ತ ದಿನಗಳೆಯುತ್ತೇವೆ. ಅವರ ಬದುಕಿಗೆ ನಾವೇ ಹೊಣೆಯೆಂದರಿತು, ಇಲ್ಲಸಲ್ಲದ ಅನ್ಯಾಯಗಳನ್ನು ಮಾಡಿಯಾದರೂ ಅವರಿಗಾಗಿ ದುಡಿಯುತ್ತೇವೆ. ಇದು ಹಿಂದಿನಿಂದಲೂ ನಡೆದು ಬಂದ ರೀತಿಯೆಂದು ತಿಳಿಯುತ್ತೇವೆ. ರಾಮಾಯಣವನ್ನು ಬರೆದ ವಾಲ್ಮೀಕಿ ಋಷಿಯು, ತನ್ನ ಪೂರ್ವಾಶ್ರಮದಲ್ಲಿ ತನ್ನ ಹೆಂಡಿರು ಮಕ್ಕಳ ಕಲ್ಯಾಣಕ್ಕಾಗಿಯೇ, ದಾರಿ ಹೋಕರ ತಲೆಯನ್ನು ಒಡೆಯುತ್ತ, ಅವರ ಸರ್ವಸ್ವವನ್ನು ಸುಲಿಯುತ್ತ, ದರೋಡೆಕಾರನಾಗಿ ಬಾಳಿದನೆಂಬುದನ್ನಿಲ್ಲಿ ನೆನಸಿಕೊಳ್ಳಬಹುದು. ಅವರೆ 'ನಾವು ಈ ಜಗತ್ತನ್ನು ಬಿಟ್ಟು ಹೋಗುವಾಗ, ಒಂಟಿಯಾಗಿಯೇ ಹೋಗುತ್ತೇವೆಂಬುದು ಹೆಚ್ಚಿನವರಿಗೆ ತಿಳಿದಿದ್ದರೂ, ತನ್ನ ಸಂಸಾರದ ಬಗೆಗೆ ಅತ್ಯಾಸಕ್ತಿಯುಳ್ಳ ಮಾನವನು, ಅದಕ್ಕಾಗಿ ದುಡಿಯುವುದೇ ತನ್ನ ಧ್ಯೇಯವೆಂದು ತಿಳಿದು ಕಷ್ಟನಷ್ಟಗಳನ್ನು ಲೆಕ್ಕಿಸದೆ ತೊಳಲಾಡುತ್ತಿರುತ್ತಾನೆ. ನಮ್ಮನ್ನು ಹೊಂದಿಕೊಂಡಿರುವವರನ್ನು ಸಾಕುವುದು ನಮ್ಮ ಧರ್ಮವು ಹೌದಾದರೂ, ಅನ್ಯಾಯದಿಂದ ಗಳಿಸುವುದು ಧರ್ಮವಲ್ಲ. ಮಾತ್ರವಲ್ಲದೆ, ನಾವಿಲ್ಲದೆ ಹೋಗಿದ್ದರೆ, ಅವರು ಬದುಕುತ್ತಿರಲಿಲ್ಲವೇ? ಎಂಬುದನ್ನು ನೆನಸಿಕೊಂಡು, ತಾವರೆಯ ಎಲೆಯು ನೀರಿನಲ್ಲಿದ್ದರೂ, ನೀರು ಅದಕ್ಕೆ ಅಂಟದಂತೆ ಇರುವಂತೆ,ನಾವು ಸಂಸಾರದಲ್ಲಿದ್ದರೂ ಅದಕ್ಕೇ ಅಂಟಿಕೊಂಡಿರ ಬಾರದು ಬಡವನಾಗಿ ಜನಿಸಿ, ತನ್ನಜೀವಮಾನದಲ್ಲಿ ದುಡಿದು ಗಳಿಸಿದ ಸಂಪತ್ತಿನಲ್ಲಿ ನೂರ ಹತ್ತು ಕೋಟಿರೂಪಾಯಿಗಳಿಗೂ ಮಿಕ್ಕ ದಾನಮಾಡಿದ ಆಂಡ್ರೂ ಕೌರ್ನಜಿ ಎಂಬ ಮಹಾಶಯನು, ಧನಿಕನಾಗಿ ಸಾಯುವುದು ನಾಚಿಗೆ ಗೇಡು' ಅಂದಿದ್ದಾನೆ ಆದರೆ ಅವನ ಹಿತೋಪದೇಶವನ್ನು ಕೇಳುವವರಾರು ?

ಉರುಟಾದ ನಾಣ್ಯದಂತೆ ಆಕಾರವಿರುವ ಸೊನ್ನೆಯೊಂದನ್ನು 'ಸಂಸಾರ' ಎಂಬ ಶಬ್ದದಿಂದ ತೆಗೆದರೆ 'ಸಸಾರ' ಎಂದಾಗುತ್ತದೆ. ಹಣದ ಮೋಹವು ಅಳಿದು ಹೋದ ಮಾನವನಿಗೆ ಸಂಸಾರವು ಸಸಾರವಾಗುತ್ತದೆಂದು ಬಲ್ಲವರು ಹೇಳುತಾರೆ. ಲೋಕದಲ್ಲಿ ನಡೆಯುವ ಹೆಚ್ಚಿನ ಕುಕರ್ಮಗಳಿಗೂ, ಮಾನವನ ದುಃಖಕ್ಕೂ ಸಿರಿಯೇ, ಕಾರಣವಾದುದರಿಂದ, ನಾವು ದುಡಿದುದರಲ್ಲಿ ಮಿತಿಯಾಗಿ ಬಳಸಿಕೊಂಡು, ಹತ್ತನೇ ಒಂದು ಪಾಲಷ್ಟಾದರೂ ಉಳಿಸಿ, ಅದನ್ನು ಇಲ್ಲದವರಿಗೆ ನೀಡಬೇಕು. ಅದನ್ನು ಪಡಕೊಂಡವರು ಪಡುವ ಸಂತೋಷವನ್ನು ಕಂಡು ನಮ್ಮ ಹೃದಯವು ಹಿಗ್ಗ ಬೇಕು. ಹಾಗಿದ್ದರೆ ಮಾತ್ರ, ನಮಗೆ ಸಂಸಾರವು ಸಸಾರವಾಗಿ, ಸುಖದದಾರಿಯು ಹತ್ತಿರವಾಗುತ್ತದೆ, ಪ್ರತಿಯೊಂದನ್ನು ಸಂಗ್ರಹಿಸ ಬೇಕೆಂಬ ದುರಾಶೆಯ ಗುಲಾಮನಾದ ಮಾನವನಿಗೆ ಕನಸಿನಲ್ಲೂ ಸುಖವೆಂಬುದು ಸಿಗಲಾರದು.

# ಕೆಲವು ಅನ್ಯ ದೇಶಿ ಪದಗಳ ಹುಟ್ಟು ಬೆಳವಣಿಗೆ

—ಬಂ. ರಂ. ಸರ್ ನೊಕದ್ದಂ.

ಭಿನ್ನ ಭಾಷೆಗಳಲ್ಲಿ ಕೊಳು–ಕೊಡುಗೆ ಅನಿವಾರ್ಯ. ಅಂತಹಾಗೆ ಕನ್ನಡಭಾಷೆಗೂ ಕೆಲವು ಭಾಷೆಗಳ ಕೊಡುಗೆ ಅಪಾರ. ಆ ಕೊಡುಗೆ ಹೇಗೆ ರೂಪಾಂತರ ಹೊಂದಿದೆ ಎಂಬುದರ ಕೆಲವು ರೂಪನಿಷ್ಪತ್ತಿಗಳ ವಿವರ ಇಲ್ಲಿದೆ.. ಎನ್ನುತ್ತಾರೆ ಮಾನ್ಯ ಲೇಖಕರು.

ಭಿನ್ನ ಭಾಷೆಗಳನ್ನಾಡುವ ಜನಾಂಗಗಳಲ್ಲಿ ಸಂಪರ್ಕವುಂಟಾದಾಗ ಆಭಾಷೆಗಳಲ್ಲಿ ಪರಸ್ಪರ ಪದಗಳ 'ಕೊಡು–ಕೊಳೆ', ನಡೆಯುವುದು ಅನಿವಾರ್ಯ. ಅದು ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅಗತ್ಯವೂ ಆಗಿದೆ. ಒಂದು ಭಾಷೆಗೆ, ಭಿನ್ನಭಾಷೆಗಳಿಂದ ಬಂದ ಪದಗಳೆಲ್ಲವೂ 'ಅನ್ಯದೇಶಿ', ಎನಿಸುತ್ತವೆ. ಕನ್ನಡವು ಸಂಸ್ಕೃತ ಜನ್ಯವಲ್ಲವಾದ್ದರಿಂದ, ಸಂಸ್ಕೃತದಿಂದ ಕನ್ನಡಕ್ಕೆ ಬಂದ ಪದಗಳೆಲ್ಲವೂ 'ಅನ್ಯದೇಶಿ' ಪದಗಳೆಂದೇ ಪರಿಗಣಿಸಬೇಕಾಗಿದೆ. ಇದೇ ರೀತಿ ಕನ್ನಡ ಭಾಷೆಗೆ ಇಂಗ್ಲಿಷಿನಿಂದ, ಉರ್ದು ವಿನಿಂದ, ಗ್ರೀಕ್ ಪಾರ್ಸಿ ಹಾಗೂ ಹಿಂದಿ ಭಾಷೆಗಳಿಂದ ಅನೇಕ ಪದಗಳು ಬಂದು ಸೇರಿವೆ. ಅಂತಹ ಪದಗಳಲ್ಲಿ ಕೆಲವು ಮುಖ್ಯ ಪದಗಳ ರೂಪನಿಷ್ಪತ್ತಿಯನ್ನು ಮಾತ್ರ ವಿವರಿಸಲಾಗಿದೆ.

ಮೊದಲಿಗೆ 'ಮುತ್ತೈದೆ' ಎಂಬ ಪದವನ್ನು ಪರಿಕಿಸೋಣ. ಇಲ್ಲಿ ಮುತ್+ಐದೆ ಎಂಬ ಪದಗಳಿವೆ, 'ಐದೆ' ಮೇಲುನೋಟಕ್ಕೆ ಕನ್ನಡತಿ ಹಾಗೆ ಕಂಡರೂ. ಆವಳ ತವರು ಸಂಸ್ಕೃತ. ಸಂಸ್ಕೃತದಲ್ಲಿ 'ಅವಿಧವಾ' [ ಸುಮಂಗಲಿ ] ಎಂಬ ಪದವಿದೆ, 'ಧವ' ಎಂದರೆ ಗಂಡ. ಮಾಧವ [ ಲಕ್ಷ್ಮಿಯ ಗಂಡ ] ಉಮಾಧವ [ ಪಾರ್ವತಿ] ಯ ಗಂಡ, ವಿ+ಧವ [ ಗಂಡಇಲ್ಲದವಳು ] ಅ+ವಿಧವಾ [ ಗಂಡಇದ್ದವಳು ]. ಈ 'ಅವಿಧವಾ' ಪದವೇ ಕನ್ನಡಿಗರ ಸೌಲಭ್ಯಾಕಾಂಕ್ಷೆಯಿಂದಾಗಿ, ಅವಿಧಾ> ಅಯಿಧಾ> ಅಯಿದಾ> ಐದಾ ಐದೆ ಎಂದು ಪರಿವರ್ತಿತವಾಗಿದೆ. ಗಂಡ ಇರುವಾಗಲೇ ಸತ್ತವಳ ಶ್ರಾದ್ಧಕ್ಕೆ ಐದಾನೋಮಿ ಎನ್ನುವ ರೂಢಿಯಿದೆ. ಇದು 'ಅವಿಧವಾನವಮಿ'ಯ ಚಿಕ್ಕರೂಪ.

ಇನ್ನು ಮುತ್ ಪದದ ಅರ್ಥವೇನಿರಬಹುದು? ಮುತ್ ಎಂದರೆ 'ಮುಪ್ಪು', ಮುದುಕಿ ಆಗಿಯೂ ಗಂಡ ಇರುವವಳೇ ಮುತ್ತೈದೆ [ಈ ಭಾಗ್ಯ ಅನೇಕರಿಗೆ ಇಲ್ಲ] ಮುದಕನಾದವನೇ 'ಮುತ್ಯಾ' ಅಲ್ಲವೆ? ಕೆಲವು ಪಂಡಿತರು, ಕುಂಕುಮ, ಮಂಗಳಸೂತ್ರ, ಕೈಬಳೆ, ಓಲೆ, ಕಾಲುಂಗುರ, ಈ ಐದು ಉಳ್ಳವಳೇ, ಐದೆ, ಎನ್ನುತ್ತಾರೆ. ಅವಳು ಇನ್ನೂ ಒಂದೊಂದು ಒಡವೆ ಧರಿಸಿದಂತೆಲ್ಲ ಆರೆ ಏಳೇ ಎಂಟೇ ಆಗಬಹುದು, ಗಂಡನಿಂದ ಮುಪ್ಪು ಪಡೆದವಳೇ 'ಮುತ್ತೈದೆ' ಎಂದು ಹೇಳುವ ರಸಿಕ ವರ್ಗವೂ ಇದೆ.

ಈಗ ಅಗಳಿಯನ್ನು ಎಳೆಯೋಣ. ಸಂಸ್ಕೃತದ 'ಅರ್ಗಲ'ಪದವೇ ಅಗಳಿ ಆಗಿದೆ. ಅರ್ಗಲ ವೆಂದರೆ 'ತಡೆ' ಬಾಗಿಲನ್ನು ಇದು ತಡೆಯುವುದರಿಂದ ಅರ್ಗಲ> ಅಗ್ಗಳ> ಅಗ್ಗಳಿ ಅಗಳಿ ಆಗಿ ರೂಪಾಂತರ ಹೊಂದಿರ ಬೇಕು. ಇನ್ನು ಕೆಲವು ವಿದ್ವಾಂಸರು, ಅಡ್ಡಗಳ ಅಥವಾ ಅಡೆಗಳದಿಂದ ಬಂದಿರ ಬೇಕು ಎನ್ನುತ್ತಾರೆ. ಇದೇ ನಿಜವಾದರೆ 'ಅಗಳಿ' ದೇಶಿ ಪದವಾಗುತ್ತದೆ. ಇದೇ ರೀತಿ 'ಓಜ' (ಗುರು) ಎಂಬ ಪದವೂ ಸಂಸ್ಕೃತದ 'ಉಪಾಧ್ಯಾಯ' ಎಂಬ ಪದದಿಂದ ಬಂದಿದೆ. ಈ ಪದವು ಪ್ರಾಕೃತದಲ್ಲಿ 'ಉವಜ್ಝಾಯ ಆಗಿದೆ' ಈ ಪದ ಮುಂದೆ ಉವಜ್ಝ> ಉವಜ▷ ಒವಜ> ಓಜ ಆಗಿದೆ. ಕನ್ನಡದಲ್ಲಿ ಉಕಾರಾದಿ ಪದಗಳು ಒಕಾರಾದಿ ಆಗಿವೆ. ಉದಾ: ಕುಡು▷ಕೊಡು, ತುಡು▷ತೊಡು, ಹಾಗೇ ಉವಜ ▷ಒವಜವಾಗಿ 'ಓಜ'ವಾಗಿದೆ ಬಿಲ್ಲೋಜ, ನಾಡೋಜ,

ಎಂಬ ಪದಗಳನ್ನು ಗಮನಿಸಬೇಕು. ಇದೇ ರೀತಿಯಲ್ಲಿ, ಸಂಸ್ಕೃತದ ಪ್ರಗ್ರಹ, ಪ್ರಣೀತ ಪದಗಳು ಕನ್ನಡದಲ್ಲಿ ಕ್ರಮವಾಗಿ ಹಗ್ಗ, ಹಣತೆಗಳಾಗಿರುವುದನ್ನು ಗಮನಿಸ ಬಹುದು.

ಈಗ 'ಹಗಣ'ದ ಹಗರಣವನ್ನು ನೋಡೋಣ ಸಂಸ್ಕೃತದ 'ಪ್ರಕರಣ' (ನಾಟಕ ಪ್ರಭೇದ) ಪದವೇ 'ಪಗರಣ'ವಾಯಿತು, "ನಾಟ್ಯಪಗರಣ" ಎಂಬ ಪದವನ್ನು ಗಮನಿಸಿರಿ ಪ▷ಹ (ಕನ್ನಡದ ಅಸಾಧಾರಣ ಲಕ್ಷಣ), ಆಗಿ ಪಗರಣ>ಹಗರಣವಾಯಿತು. ಈ 'ಹಗರಣ,ವೇ ಮಿತವ್ಯಯಾಸಕ್ತಿಯ ಫಲವಾಗಿ 'ಹಗಣ' ವಾಯಿತು. ಇದರಂತೆ 'ಚೀರ' ಎಂಬ ಪದವು ಸೀರೆ ಆಗಿದೆ, ಸಂಸ್ಥಾ ಪದವು ಸಂತೆ ಆಗಿದೆ, ಪ್ರಣೀತ ಕನ್ನಡದಲ್ಲಿ ಹಣತೆ ಆಗಿದೆ. ಸಂಸ್ಕೃತದ 'ಅರ್ಘ್ಯಪಾನೀಯ' ವೇ ಕನ್ನಡದಲ್ಲಿ 'ಅಗ್ಗವಣಿ, ಆಗಿದೆ, ಕೂರ್ಪಾಸ ಎಂಬ ಪದವು ಕುಪ್ಪಸ ವಾಗಿ ಗ್ರಾಮ್ಯದಲ್ಲಿ ತುಪ್ಪ ತುಬ್ಯವಾಗಿದೆ.

ಪೋರ್ತುಗೀಜ ಭಾಷೆಯಿಂದ ಬಂದ ಪದ ಗಳನ್ನು ನೋಡೋಣ, 'ಟಾವೇಲು' ಅಥವಾ 'ಟವೆಲ್, ಎಂಬ ಪದ 'ಟೋಅಲ್ಹಾ, [Toaiha] ದಿಂದಬಂದಿದೆ. ತಂಬಾಕ ಪದವು [Tabaco] ಟಬಾಕೊ ದಿಂದ ಬಂದಿದೆಯೆಂದು ಹೇಳುತ್ತಾರೆ. ಸಂಸ್ಕೃತದಲ್ಲೂ 'ತಮಾಖ ಪತ್ರ' ಎಂಬ ಪದವಿದೆ. ಸಂಸ್ಕೃತವು ಅನೇಕ ಭಾಷೆಗಳ ತಾಯಿ. ಆದ್ದರಿಂದ ತಂಬಾಕ ಸಂಸ್ಕೃತದಿಂದಲೇ ಬಂದಿರ ಬಹುದೆ? ಇದೇ ರೀತಿ [Sabao] ಸಬಾಓ ಪದವೇ ಕನ್ನಡದಲ್ಲಿ ಸಾಬಾಣ, ಸಬ್ಬು, ಸಬಕಾರ, ಶಾಬೂ. ಅನೇಕ ನಾಮಗಳನ್ನು ಧರಿಸಿದೆ. (chabuco) ಚಾಬೂಕೊ ಎಂಬ ಪದ ಚಾಬೂಕು [ಹಲವುಕಡೆ ಚಬಕಾ] ಆಯಿತು. ಈ ಪದವು ಪರ್ಶಿಯನ್ ದಿಂದ ಬಂದಿದೆ ಎಂಬ ವಾದವೂ ಇದೆ. ಏನೇ ಆದರೂ ಇದು ಅನ್ಯದೇಶಿ ಎಂಬುದು ಖಚಿತ.

ಕನ್ನಡ ಮೇಲೆ ಇಂಗ್ಲೀಷಿನ ಪ್ರಭಾವ ಬಹಳ ಷ್ಟಾಗಿದೆ. ಪ್ಯಾಂಟು, ಕೋಟು, ಬೂಟು, ಶರ್ಟು, ಕೋರ್ಟು, ಕಾಲೇಜ, ಪ್ರೊಫೆಸರ್ ಇತ್ಯಾದಿ ಪದಗಳು ಅಲ್ಪ ಸ್ವರವ್ಯತ್ಯಾಸದೊಂದಿಗೆ ಕನ್ನಡದಲ್ಲಿ ಬಂದಿವೆ. ಇಂಗ್ಲೀಷಿನಿಂದ ಬಂದರೂ ಪತ್ತೆಯಾಗದ ಪದವೆಂದರೆ 'ಲಾಂದ್ರ, ಇದು ಇಂಗ್ಲೀಷಿನ 'Lantern [ಲ್ಯಾಟರ್ನ] ದಿಂದ ಬಂದಿದೆ. ಲಾಂದ್ರ ಪದವು ಲಾಟನ್ನು, ಲಾಟ್ನ ಎಂದೂ ಬಳಕೆಯಾಗಿದೆ. Hospital [ಹಾಸ್ಪಿಟಲ್] ಪದವೇ 'ಆಸ್ಪತ್ರೆ, ಆಗಿರಬೇಕೆಂದು ಹೇಳುತ್ತಾರೆ. ಇಂಗ್ಲೀಷಿನ ಇನ್‌ಜಕ್ಷನ್ ಗ್ರಾಮ್ಯದಲ್ಲಿ 'ಇಂಗ್ಲೀಸು' ಆಗಿದೆ. ಗ್ರೀಕ್ ಭಾಷೆಯ 'ಡಿನೇರಿಯಸ್' ಪದವು 'ದೀನಾರ' ವಾಗಿಯೂ, ಡ್ರಾಕ್ಮಾ, ಪದವು ದ್ರಮ್ಮ (ಒಂದು ಬೆಳ್ಳಿನಾಣ್ಯ) ವಾಗಿದೆಯೆಂದೂ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಹಿಂದಿ, ಮಾರಾಠಿ, ಉರ್ದುಭಾಷೆಗಳಸಂಪರ್ಕವು ಕನ್ನಡಿಗರಿಗೆ ಬಂದುದರಿಂದ ಅವುಗಳ ಪ್ರಭಾವವನ್ನು ಕಾಣಬಹುದು. ಹಿಂದಿಯ ಜಮೀನ್, ಜಾಮೀನ್, ಕಚಹರಾ (ಕಚೇರಿ) ದೀವಾನ್, ದವಾಖಾನಾ, ಮೊದಲಾದ ಪದಗಳು ಅಲ್ಪವ್ಯತ್ಯಾಸ ದೊಂದಿಗೆಕನ್ನಡಕ್ಕೆ ಬಂದಿದೆ, ಉರ್ದುಭಾಷೆಯ 'ಹುಕುಮ್' ಶಬ್ದವು ಹುಕುಮು ಹುಕಮತ್ತು ಗಳಾಗಿ ಬಳಕೆಯಾಗಿದೆ. ಮರಾಠಿಯ ಪದಗಳಾದ 'ಅಡೀಚ್, 'ಶಂಭರ್, ಛಕ್ಕಾ (ಆರು) ಮೊದಲಾದ ಪದಗಳನ್ನು ಕನ್ನಡ ಭಾಷೆಯಲ್ಲಿ ಕಾಣಬ ಹುದಾಗಿದೆ. ಹೀಗೆಂದಮಾತ್ರಕ್ಕೆ ಕನ್ನಡ ಪದಗಳು ಉಳಿದ ಭಾಗಳಲ್ಲಿ ಸೇರಿಲ್ಲವೆಂದು ತಿಳಿಯಬೇಕಿಲ್ಲ. ಅದನ್ನುತೋರಿ ಸುವ ಉದ್ದೇಶ ಈ ಲೇಖನದ್ದಲ್ಲ!

ಅನ್ಯಭಾಷಾ ಪದಗಳ ಸ್ವೀಕರಣದ ಬಗೆಗೆ ಅನೇಕ ಭಾಷಾಭಿಮಾನಿಗಳು ಬಿನ್ನಾಭಿಪ್ರಾಯ ತಳೆದಿದ್ದಾರೆ, ಅಂತಹ ಪದಗಳನ್ನು ಇದ್ದಕ್ಕಿದ್ದಂತೆ ತೆಗೆದು ಕೊಳ್ಳದೇ ಆಯಾ ಭಾಷೆಗಳಲ್ಲಿ ಅನುವಾದಿಸಬೇಕೆಂದೂ ವಾದಿಸುತ್ತಾರೆ, ಉದಾಹರಣೆಗೆ, 'ಆಕ್ಸಿಜನ್, 'ಹೈಡ್ರೋಜನ್' ಪದಗಳನ್ನು ಕ್ರಮವಾಗಿ 'ಆಮ್ಲಜನಕ' 'ಜಲಜನಕ ಎಂದು ಹೇಳಬೇಕು. ಹಾಗೆ ಅನುವಾದಿಸಲು ಸಾಧ್ಯ ವಾಗದಿದ್ದರೆ ಏನುಮಾಡುವುದು? ನೆಕ್‌ಟೈ ಪದವನ್ನು ಕಂಠಲಂಗೋಟಿ ಅಥವಾ 'ಕೊರಳ ಪಟ್ಟಿ' ಎಂದರೆ ಸರಿಯೆ? 'ಸಿಗ್ನಲ್' ಪದವನ್ನು "ಅವಕಜಾವಕ, ಸೂ

25 ನೇ ಪುಟ ನೋಡಿ

# ಬಸವರಸ ತೋರಿದರೆ...ಹೊಸ ಹೊಸ ಲೀಲೆಗಳ.... ೩

—ಹೆಚ್. ಜಿ. ರಾಧಾದೇವಿ

ಬಸವಣ್ಣನವರು ತಮ್ಮ ಆರುಜನ್ಮದ ರಹಸ್ಯ ಹೇಳಿ ಪವಾಡ ತೋರಿದಂದಿನಿಂದ ಬಾಗೆವಾಡಿಯಲ್ಲಿ ಅವರ ಬೆಲೆ ಹೆಚ್ಚಿತ್ತು. ಅವತಾರ ಪುರುಷನೊಬ್ಬ ಉದಯಸಿದ್ದಾನೆ. ಎಂಬ ವಾರ್ತೆ ಹಬ್ಬಿ ಸುತ್ತು ಹತ್ತೂರಿಂದ ಜನ ಈ ಬಾಲಕನ ದರ್ಶನಕ್ಕಾಗಿ ಬಹಳ ಕಾತುರರಾಗಿ ಬರತೊಡಗಿದರು.

ಸುತ್ತ ಹತ್ತೂರಿಂದ ಸುವ್ವಲಾಲಿ।
ಒತ್ತಿ ಕವಿದ ತಂಡ ಸುವ್ವಲಾಲಿ॥
ಹೊತ್ತ ಕೋರಿಕೆಗಳು ಸುವ್ವಲಾಲಿ।
ರಕ್ಷಿಸಿ ಸಲಿಸೆಂದ್ರು ಸುವ್ವಲಾಲಿ॥

ದೈವೀಪುರುಷನೊಬ್ಬ ಇದ್ದಾನೆಂದರೆ ಜನ ಸುಮ್ಮನೇ ಬರುತ್ತಾರೆಯೆ? ತಮ್ಮ ಮನದಲ್ಲಿ ಹುದುಗಿಗಿದ್ದ ನಾನಾ ಕೋರಿಕೆಗಳನ್ನು ನೆರವೇರಿಸಲು ಆ ಮಗುವಿಗೆ ಕೇಳಿಕೊಳ್ಳುತ್ತಾರೆ. ತಾವು ನೆಚ್ಚಿ ಬಂದ ಈ ಮಗು ಏಳು ವರುಷದ ಬಾಲಕನೆಂಬುದು ಸಹ ಜನರಿಗೆ ಮರೆತು ಹೋಗುತ್ತದೆ. ದೇವರು ಪ್ರತ್ಯಕ್ಷನಾಗಿ ನಿಂತಾಗ ಹೇಗೆ ಬಗೆ ಬಗೆ ಬಯಕೆಗಳಿಗೆ ಕಾತರಿಸುತ್ತಾರೋ--- ಹಾಗೆ ಈ ಮಗುವಿನೆದುರು ತಮ್ಮ ಬದುಕನ್ನೆ ಬಿಚ್ಚಿಟ್ಟರು

ಮುಪ್ಪುಕವಿದ ದೇಹ ಸುವ್ವಲಾಲಿ।
ಒತ್ತಿದ ರೋಗ ಹರಿಸೊ ಸುವ್ವಲಾಲಿ॥
ಸತ್ತ ಒಬ್ಬನೆ ಪುತ್ರ ಸುವ್ವಲಾಲಿ।
ಮತ್ತೆ ಬದುಕಿಸೋ ಬಸವ ಸುವ್ವಲಾಲಿ॥

ಮುಪ್ಪಿನ ಮುದಕರು ತಮ್ಮ ಬಗೆ ಬಗೆ ರೋಗ ಹರಿಸಿ ಆರೋಗ್ಯ ನೀಡಲು ಕೇಳುತ್ತಾರೆ. ಸತ್ತ ಮಗನನ್ನು ಬದುಕಿಸೆಂದು. ಕೇಳುವರ ತಂಡವೂ ಬರಲಾರಂಬಿಸಿದೆ.

ಮೆಚ್ಚಿದ ಕನ್ಯೆಯ ಸುವ್ವಲಾಲಿ॥
ಮತ್ತೆ ಕೂಡಿಸೊ ಬಸವ ಸುವ್ವಲಾಲಿ।
ಪುತ್ರ ಸಂತಾನವ ನೀಡು ಸುವ್ವಲಾಲಿ॥
ಹತ್ತೊರುಷ ಬದುಕಾಯ್ತು ಸುವ್ವಲಾಲಿ।

ಶಿವನಾಮದೊಡನೆ ಶಿಶು ನೀಡಿದ ವಿಭೂತಿ ಸಕಲರ ಪಾಲಿನ ಔಷಧ ವಾಯಿತ್ತು.

ಹೊನ್ನಿಗೆಂದು ಬಂದಾರೊ ಸುವ್ವಲಾಲಿ॥
ಹೆಣ್ಣ ಕೇಳಿ ಬಂದಾರೊ ಸುವ್ವಲಾಲಿ।
ಮಣ್ಣ ಕಾಯ ಮಮತೆಯೊ ಸುವ್ವಲಾಲಿ॥
ಇನ್ನು ಶಿವಬಕುತಿಗೊಬ್ರಿಲ್ಲ ಸುವ್ವಲಾಲಿ।

ಜನರ ಲೌಕಿಕದಾಹದ ತೀವ್ರತೆಗೆ ಶಿಶು ಬಸವರಿಗೆ ಬೇಸರವಾಯಿತು.

ಹೊನ್ನು ಹಣಕ್ಕಾಗಿ ಬರುತ್ತಿದ್ದಾರೆ. ಹೆಣ್ಣು ಮಣ್ಣಿಗಾಶಿಸಿ ಬರುತ್ತಿದ್ದಾರೆ, ಆಸ್ತಿ, ಆರೋಗ್ಯಕ್ಕಾಶಿಸಿ ಬರುತ್ತಿದ್ದಾರೆ, ಆದರೆ ಹೊನ್ನಿಗೆ ಹೊನ್ನಾದ ಶಿವನಾಮಕ್ಕೆ ಆಪೇಕ್ಷಿಸಿ ಮಾತ್ರ ಯಾರೊಬ್ಬರು ಬರಲಿಲ್ಲ.

ಕರ್ಮದಲ್ಲಿ ಸವೆದಬಾಳು ಸುವ್ವಲಾಲಿ॥
ಧರ್ಮವಲ್ಲ ಎನಿಸಿತೊ ಸುವ್ವಲಾಲಿ॥
ಒಮ್ಮನವ ನಿಶ್ಚಯಿಸಿ ಸುವ್ವಲಾಲಿ॥
ಬ್ರಾಹ್ಮಣ್ಯ ಒಲ್ಲೆನೆಂದ್ರೊ ಸುವ್ವಲಾಲಿ॥

ಶಿವನಾಮ ದೀಕ್ಷೆ ಕೊಟ್ಟು ಮಗುವಿಗೆ ಮುಂಜಿ ಮಾಡಬೇಕೆಂದು ಈತನ ಪವಾಡಕ್ಕೆ ಇನ್ನೂ ಸಿದ್ಧಿ ಬರವುದೆಂದು ಊರವರು ಹಾಗು ತಂದೆ ತಾಯಿಯರು ಯೋಚಿಸಿದರು. ಆದರೆ ಶಿಶು ಬಸವರಿಗೆ ತಮ್ಮ ಕಾಲ ವ್ಯರ್ಥವಾಗಿ ಕಳೆಯುತ್ತಿದೆಯೆನಿಸಿ ವ್ಯಥೆಯಾಯಿತು. ಶಿವಭಕ್ತಿಗೆ ಒಂದು ಕ್ಷಣ ಬಿಡುವಿಲ್ಲ, ಕರ್ಮಸವಾಡದಲ್ಲಿ, ಯುಕ್ತಿಮೋಹದಲ್ಲಿ ದಿನ ಕಳೆದು ಹೋಗುತ್ತಿದೆ. ಜನ ಇದಕ್ಕೆ ಮರುಳಾಗುತ್ತಿದ್ದಾರೆ, ಅಲ್ಲದೆ ಶಿವ ಮೇಲಣ ಲೋಕದಿಂದ ತನ್ನ ಕಳುಹಿದ್ದಾದರೂ ಏಕೆ?

ಧರ್ಮ ನಿಲ್ಲಿದೆಂದ್ರು ಶಿವ ಸುವ್ವಲಾಲಿ।
ಅಧರ್ಮ ಹೊರದೂಡೆಂದ್ರು ಸುವ್ವಲಾಲಿ॥
ಕರ್ಮದ ನೆಲೆ ಪಾಪವೂ ಸುವ್ವಲಾಲಿ।
ಪೆರ್ಮ ಭಕ್ತಿಯೆ ಹಿತ ಸುವ್ವಲಾಲಿ॥

ಕರ್ಮಪಥದಿಂದ ಹೊರಬಂದು ಭಕ್ತಿ ಪಥದಲ್ಲಿ ಸಾಗಿ ಜನಕ್ಕೆ ಮಾರ್ಗದರ್ಶನ ಮಾಡಲು ಭಕ್ತಿ ಭಂಡಾರಿಗಳು ನಿಶ್ಚಯ ಮಾಡುತ್ತಾರೆ.

ಆದರೆ ಈ ಸಮಯದಲ್ಲಿ ಮಗುವಿನ ಮನದ ಒಳತೋಟಿಯನ್ನು ತಿಳಿಯಲಾರದೆ ತಂದೆತಾಯಿ ಹಾಗು ಊರವರೆಲ್ಲಾ ಮಗುವಿನ ಮುಂಜಿಗೆ ಸಂಭ್ರಮದ ಸಿದ್ಧತೆ ಮಾಡುತ್ತಿದ್ದಾರೆ.

ಹತ್ತು ಹರಿದಾರಿಯುದ್ದ ಸುವ್ವಲಾಲಿ।
ಹೊತ್ತ ಹಸಿರು ಚಪ್ಪರ ಸುವ್ವಲಾಲಿ॥
ಮುತ್ತಿನ ಮಂಟಪದಾಗೆ ಸುವ್ವಲಾಲಿ।
ಕೆತ್ತನೆ ಗಂಧದ ಮಣೆ ಸುವ್ವಲಾಲಿ॥

ಊರಿಗೆಲಾ ಹಸಿರು ತೋರಣಾ....ಬೀದಿ ಬೀದಿಗಳಲ್ಲಿ ರಂಗವಲ್ಲಿಗಳು ಅಲ್ಲಲ್ಲಿ ಕಲಶ ಕನ್ನಡಿಗಳು....ಧೂಪ ದೀಪ ಪುಷ್ಪಾಲಂಕಾರಗಳು.

ಏಳು ಹರಿದಾರಿಯುದ್ದ ಸುವ್ವಲಾಲಿ।
ಹೊಂಬಾಳೆ ಚಪ್ಪರವು ಸುವ್ವಲಾಲಿ॥
ರಾಯಬಸವರ ಮುಂಜಿ ಸುವ್ವಲಾಲಿ।
ಊರೆಲ್ಲಾ ಸಡಗರವೊ ಸುವ್ವಲಾಲಿ॥

ಮುದ್ದು ಬಸವಣ್ಣನ ಮುಂಜಿಗೆ ತಾಯಿ ಮಾದಲಾಂಬಿಕೆ ಮಾತ್ರ ಹಿಗ್ಗಿದರೆ ಸಾಕೆ....? ಊರ ಹೆಂಗಳೆಯರಿಗೆಲ್ಲಾ ಹಿಗ್ಗೋ ಹಿಗ್ಗು.

ಪಿಲ್ಲಿ ಕಾಲುಂಗುರ ಬಿಟ್ಟು ಸುವ್ವಲಾಲಿ॥
ಉಲ್ಲುರುಳಿ ಪೈಜಣವು ಸುವ್ವಲಾಲಿ।
ಚೆಲ್ವೆಯರು ಸಿಂಗಾರದಿಂದ ಸುವ್ವಲಾಲಿ॥
ಘುಲ್ಲ್ ಘುಲ್ಲೆಂದು ಬಂದ್ರೋ ಸುವ್ವಲಾಲಿ।

ಬಾಗೇವಾಡಿಯ ಸುಪ್ರಸಿದ್ಧ ದೇವಾಲಯವಾದ ಸಂಗಮನಾಥಸ್ವಾಮಿ. ದೇವಾಲಯದಲ್ಲಿ ಉಪನಯನ ಮಂಟಪದಲ್ಲಿ ಬಾಲಕನಾದ ಬಸವನನ್ನು ಕರೆತಂದರು. ವಿಪ್ರರು ಮಂತ್ರೋಕ್ತವಾಗಿ ಬಾಲಕನ ಕೊರಳಿಗೆ ಜನಿವಾರ ತೊಡಿಸುತ್ತಾರೆ. ಆದರೆ ಬಾಲಕ ಬಸವ ಆ ಜನಿವಾರ ಕೊರಳಿಂದ ಎತ್ತಿ ಕರದಲ್ಲಿ ಹಿಡಿದು ಕಣ್ಣೊಗ್ತಿ, ಕಿವಿಗೊತ್ತಿ, ನಾಲಿಗೆಯಿಂದ ಚಪ್ಪರಿಸಿ, ಹಲ್ಲಿಂದ ಕಚ್ಚಿ, ಹರಿದು ಹೊರಗೆಸೆಯುತ್ತಾರೆ.

ಮಗುವಿನ ಈ ವಿಚಿತ್ರ ಲೀಲೆಯನ್ನು ಕಂಡು ಬ್ರಾಹ್ಮಣರು ಹಾಗು ತಂದೆ ತಾಯಿಗಳು ಕೋಪದಿಂದ ಕಾರಣ ಕೇಳುತ್ತಾರೆ. ಆಗ ಬಸವಣ್ಣ ಕಾರಣ ವಿವರಿಸುತ್ತಾ

ಶಿವನಾಮ ರುಚಿಯಿಲ್ಲ ಸುವ್ವಲಾಲಿ।
ಭವ ಬಂಧ ಈ ಜನಿವಾರ ಸುವ್ವಲಾಲಿ॥
ಶಿವಲಿಂಗಸ್ವಾದವಿಲ್ಲ ಸುವ್ವಲಾಲಿ।
ಭವಬಂಧ ಈ ಜನಿವಾರ ಸುವ್ವಲಾಲಿ॥

ಶಿವನಾಮದ ಮಾಧುರ್ಯ, ಸವಿ, ಸ್ವಾದ ಒಂದೂ ಈ ದಾರದಲ್ಲಿ ಕಾಣಲಿಲ್ಲ ಪರೀಕ್ಷಿಸಿ ಹರಿದೆಸದೆ. ಇದು ಭವಬಂಧನ ನಾನೊಲ್ಲೇ....ಎಂದು ಹಸೆಮಣೆಯಿಂದ ಹೊರ ಬರುತ್ತಾರೆ. ಆದರೆ ಲೋಕಕ್ಕೊಲ್ಲದ ಈ ಕುರುಹನ್ನು ಊರವರು ಒಪುತ್ತಾರೆಯೆ? "ಜನಿವಾರ ಬಿಸುಟ ನಂತರ ಭ್ರಷ್ಟನಲ್ಲದಿದ್ದರೆ....ಶ್ರೇಷ್ಠ ಶಿವಭಕ್ತನೆಂಬ ಕುರುಹು ದೋರು" ಎನ್ನುತ್ತಾರೆ. ಆಗ ಬಸವ ಸಂಗಮೇಶನೆದುರು ಕಣ್ಮುಚ್ಚಿ ಕರಜೋಡಿಸಿ–"ನಿನ್ನ ಭಕ್ತ ನಾನಾದ್ರೆ....ಚೆನ್ನಾದ ಕುರುಹು ತೋರು ಎಂದು

25 ನೇ ಪುಟ ನೋಡಿ

# ಧ್ಯಾನ ಕುಸುಮಾಂಜಲಿ

— ವಿರೂಪಾಕ್ಷಯ್ಯ

ಭೋಗ--ತ್ಯಾಗಗಳ ಸಮನ್ವಯ ಆಧ್ಯಾತ್ಮ ಚಕ್ರವರ್ತಿಯಾದ ಮಾರ್ಕಸ್ ಆರೀಲಿಯಸ್ಸಿನ ಧ್ಯಾನಮಂಜರಿಯ ಆಯ್ದ ಮುತ್ತುಗಳು- ಸಂ.

---

ಎಪಿಕ್ಟೈಟಸ್–ಮಾರ್ಕಸ್ ಆರೀಲಿಯಸ್ ಈ ಇಬ್ಬರು ಆಂಶೀಪುರುಷರ ಹೆಸರುಗಳ ಇಂದಿಗೂ ಸ್ಟೋಯಿಕ್ ಪಂಥದಲ್ಲಿ ಚಿರಸ್ಥಾಯಿಯಾಗಿ ಉಳಿದಿವೆ. ಗುಲಾಮನಾಗಿ ಹುಟ್ಟಿ ಜೀವನದ ಜಂಜಾಟದ ಸುರುಳಿಗೆ ಸಿಕ್ಕಿ ಬೇಸತ್ತು ಜನ್ಮ ಸಾಫಲ್ಯಹೊಂದಲು ಆಧ್ಯಾತ್ಮದ ಮೇರುವನ್ನೇರಿದ ಮಹಾಜ್ಞಾನಿ ಎಪಿಕ್ಟೈಟಸ್. "ಮಾರ್ಕಸ್ ಆರೀಲಿಯಸ್ಸ"ನಾದರೋ ವಿಶಾಲವಾದ ರೋಮ್ ದೇಶದ ಚಕ್ರವರ್ತಿಯಾಗಿ, ಪ್ರಜಾಪಾಲನೆಯಂತಹ ಬೃಹತ್ ಜವಾಬುದಾರಿಯ ಕಾರ್ಯ ಭಾರದ ನಡುವೆಯೂ ಪಾರಮಾರ್ಥಿಕ ಶಕ್ತಿಯನ್ನು ಕಡೆಗಾಣಿಸದೆ, ಕರ್ತವ್ಯ ಕರ್ಮಗಳನ್ನು ಈಶ್ವರಾರ್ಪಣ ಭಾವದಿಂದ ನಿರ್ವಹಿಸುತ್ತಾ. ಮಾನಸಿಕವಾಗಿ ಸರ್ವಸ್ವವನ್ನು ಬಿಟ್ಟು ತಾವರೆಯ ಎಲೆಯ ಮೇಲಿನ ನೀರಿನ ಹನಿಯಂತೆ ಬಾಹ್ಯದಲ್ಲಿ ಚಕ್ರವರ್ತಿಯಂತಿದ್ದರೂ ಆಂತರಿಕವಾಗಿ ಸಂತನಂತೆ ಬಾಳಿ ಅಮರನಾಗಿದ್ದಾನೆ.

ತನ್ನ ಆಧ್ಯಾತ್ಮಿಕ ಸಾಧನೆಯ ಬೆಳಗಿನಲ್ಲಿ ಕಂಡ ಅನುಭವಗಳನ್ನು ತನ್ನಂಥ ಮುಮುಕ್ಷುಗಳ ಪ್ರಯೋಜನಾರ್ಥವಾಗಿ "ಧ್ಯಾನಮಂಜರಿ" ಎಂಬ ಪುಸ್ತಕದಲ್ಲಿ ಬರೆದಿಟ್ಟಿದ್ದಾನೆ. ಅಂತಹ ಅತ್ಯಮೂಲ್ಯ ಧ್ಯಾನ ಕುಸುಮಗಳಲ್ಲಿ ಕೆಲವನ್ನು ಆಯ್ದು ಇಲ್ಲಿ ಕೊಡಲಾಗಿದೆ.

### ನೀ ಪ್ರಭು ನಾ ಕಿಂಕರ

ನಿನಗೆ ಯಾವುದು ಹಿತವೋ ನನಗೂ ಅದೇ ಹಿತವಾದುದು. ಓ ವಿಶ್ವವೇ ! ನಿನಗೆ ಸಕಾಲವಾದುದೊಂದೂ ನನಗೆ ಅಕಾಲವಲ್ಲ. ನಿನ್ನ ಋತುಗಳು ಇದೇನು ಹೊತ್ತು ತರಲಿ ಅವೆಲ್ಲವೂ ನನಗೆ ಶುಭ ಫಲಗಳೇ, ಓ ಜಗವೇ ! ನಿನ್ನಿಂದಲೇ ಸಮಸ್ತ ವಸ್ತುಗಳ ಉತ್ಪತ್ತಿ, ನಿನ್ನಲ್ಲಿಯೇ ಸಮಸ್ತ ವಸ್ತುಗಳ ಸ್ಥಿತಿ, ನಿನ್ನಲ್ಲಿಗೇ ಸಮಸ್ತ ವಸ್ತುಗಳ ಗತಿ! ಅಥೆನ್ಸ್ ಪುರನಿವಾಸಿಯೊಬ್ಬ ತನ್ನ ಪಟ್ಟಣದ ಸೊಬಗನ್ನು ಕಂಡು "ಓ ನನ್ನ ಪ್ರಿಯ ಪಟ್ಟಣವೇ!" ಎಂದು ಹಾತೊರೆಯುವನು. ನಿನ್ನನ್ನು ನೋಡಿ ನಾನು "ಈಶ್ವರನ ಪ್ರೇಮ ನಗರವೇ!" ಎಂದು ಹೇಳಲಾರೆನೆ?

### ಏಕಾರ್ತದ ಶಕ್ತಿ ವಿಶೇಷ ಈ ವಿಶ್ವ:

ವಿಶ್ವವೆಲ್ಲಾ ಒಂದೇ ಒಂದು ಸಚೇತನ ವಸ್ತುವೆಂದೂ, ಏಕಾರ್ತ ಉಳ್ಳದೆಂದೂ ತಿಳಿ. ಸಕಲ ಪದಾರ್ಥಗಳೂ ಏಕ ಮಾತ್ರ ಅಂತಃಕರಣದಲ್ಲಿ ಕೊನೆಗೊಂಡಿರುವುವೆಂದೂ, ಆ ಏಕಾರ್ತದ ಚಿಂತನೆಗನುಸಾರವಾಗಿ ಅದರ ಶಕ್ತಿ ವಿಶೇಷದಿಂದ ಚಲಿಸುವುವೆಂದೂ ತಿಳಿದಿರು. ಪ್ರತಿಯೊಂದು ವಸ್ತುವಿನ ಸ್ಥಿತಿ ಗತಿಗಳಿಗೂ ಉಳಿದ ವಸ್ತುಗಳೆಲ್ಲವೂ ಕಾರಣ ಭೂತಗಳೆಂಬುದನ್ನು ವಸ್ತುಗಳ ಪರಸ್ಪರ ಸಂಬಂಧ–ಅನುಬಂಧಗಳಿಲ್ಲದೆ ಯಾವ ಕಾರ್ಯವೂ ಸಂಭವಿಸುವುದಿಲ್ಲವೆಂಬುದನ್ನೂ ಗ್ರಹಿಸು.

ಆತ್ಮವೆಂಬ ದೈವಿಕಂಶವನ್ನು ಬಿಟ್ಟರೆ ಉಳಿದ ನೀನೆಂಬುದೇನು? ಎಪಿಕ್ಟೈಟಸ್ಸನು ಸೊಗಸಾಗಿ ಹೇಳಿದಂತೆ "ಶರೀರವೆಂಬ ಶವವನ್ನು ಹೊತ್ತು ತಿರುಗಾಡಲು ನೇಮಿಸಿರುವ ಒಂದು ನಿರ್ಭಾಗ್ಯ ಜೀವವೇ ಅಲ್ಲವೆ,"

(7 ನೇ ಪುಟದಿಂದ)

ವು ಸುಖಾಂತವಾಗುತ್ತದೆ. ಇದು "ಮಹಾಕಾಲ" ಲಿದು ಅನುಷಂಗಿಕವಷ್ಟೆ.

ಕಾಳಿದಾಸ ಕಲ್ಪನೆಯ ಮೇಘೋಡ್ಡಾಣವು ಈಗ ಸ್ಮೃತಿ ಶೇಷವಾಗಿದೆ. ಸಿಪ್ರಾ, ವಂತಿ ಈ ಮಹಾಕವಿಗೆ ಸ್ಮರಣಾಂಜಲಿಯನ್ನರ್ಪಿಸಿದರೆ, "ಮಹಾಕಾಲ" ಸ್ವಾಮಿಗೆ ಇವು ಸದಾ ಭಕ್ತ್ಯಂಜಲಿಯನ್ನರ್ಪಿಸುತ್ತಿವೆ ಈ ವಿದ್ವತ್ತೀರ್ಥದ ಅಧಿಷ್ಠಾತೃವಾದ "ಮಹಾಕಾಲ" ನಿಗೆ ಭಗವದ್ಭಕ್ತರ, ವಿದ್ವಜ್ಜನರ, ಗೀರ್ವಾಣಭಾಷಾವಿದರ ಪ್ರಣಾಮವು ಚಿರಂತನವಾಗಿ ಅರ್ಪಿತವಾಗುತ್ತಿದೆ.

ವಂತೀ ಪ್ರಾಂತದ ಶೈಲ ಶಿಖರಗಳ ಮೇಲೆ ಹರಡಿದ ಸಂಧ್ಯಾರುಣಚ್ಛಾಯೆಯು ಸುಂದರವಾದ ಶಿವನ ಕೆಂಜೆಡೆಯ ಅನುಭೂತಿಯನ್ನು ಕಲ್ಪಿಸುವುದು. ಈ ಪರಿಸರದ ಕಣಿವೆಯ ವಿಸ್ತಾರದಲ್ಲಿ ಪಸರಿಸುವ ಶಶಿಕಾಂತಿಯು ಶೈಲಜಾಪತಿಯಾದ ಶಶಿಭೂಷಣನನ್ನು ನೆನಪು ಮಾಡುವುದಲ್ಲದೆ ವರ್ತಮಾನ, ಭೂತ, ಭವಿಸ್ಯತ್ತುಗಳೆಲ್ಲ ತಾನೇ ಆಗಿರುವ "ಮಹಾಕಾಲ" ನ ದಿವ್ಯ ಸನ್ನಿಧಿಯಾದ ಉಜ್ಜಯಿನಿಗೆ ಮಂಗಳ ಪ್ರಭಾಸವನ್ನು ನೀಡುವುದು.

"ಅವಂತಿ ಕಾಯಾಂ ವಿಹಿತಾವತಾರಂ
ಮುಕ್ತಿ ಪ್ರದಾನಾಯಚ ಸಜ್ಜನಾನಾಂ
ಅಕಾಲಮೃತ್ಯೋಃ ಪರಿರಕ್ಷಣಾರ್ಥಂ
ವಂದೇ ಮಹಾ ಕಾಳಮಹಾಸುರೇಶಂ"

—

(21 ನೇ ಪುಟದಿಂದ)

ಚಕ ಸ್ತಂಬ, ಎಂದು ಅನ್ನುವುದರೊಳಗೇ ಗಾಡಿ ಇನ್ನೊ ನಿಲ್ದಾಣವನ್ನು ತಲುಪಬಹುದು! ಆದುದರಿಂದ ಅಂತಹ ಪದಗಳನ್ನು ಅಲ್ಪವ್ಯತ್ಯಾಸದೊಂದಿಗೆ ಸ್ವೀಕರಿಸುವುದೇ ಸೂಕ್ತವೆನಿಸುತ್ತದೆ.

"ಹೀಗೆ ಬೆಳೆಯುತ್ತಿರುವ ಭಾಷೆಯು ಹೊರಗಿನ ಹವೆ ಆಹಾರವನ್ನು ಸ್ವೀಕರಿಸಿ, ಒಡಲ ನೂಲಿನಿಂದಲೆ ತನ್ನ ಜಾಲವನ್ನು ನೇಯುವ ಜೇಡನ ಹಾಗೆ ಹೊಂಗಿಸ ಸ್ವೀಕರಣಕ್ಕೂ ಒಳಗಿನ ವ್ಯತ್ಯಾಸಕ್ಕೂ ಸದೈವ ಸಿದ್ಧವಿದೆ." ಎಂಬ ಶ್ರೀಯುತ ರಾ. ಯ. ಧಾರವಾಡಕರ್ ಅವರ ಧ್ವನಿಯೊಂದಿಗೆ ದನಿಗೂಡಿಸುತ್ತೇನೆ

(23 ನೇ ಪುಟದಿಂದ)

ಜೇಡುತ್ತಾರೆ. ಆಗ ಒಂದು ಪವಾಡ ನಡೆಯಿತು. ಏನೆಂದರೆ–

ಶಿವಲಿಂಗದಿಂದ ಹೂ ಮಾಲೆ ಹಾರಿ ಸುವ್ವಲಾಲಿ!
ಬಾಲ ಬಸವರ ಕೊರಳಿಗೆ ಬಿತ್ತು ಸುವ್ವಲಾಲಿ‖
ಗಜನಂದಿ ಮೇಲಿಟ್ಟ ಬಿಡಿ ಹೂವು ಸುವ್ವಲಾಲಿ।
ಮಗುವಿನ ಶಿರದಲ್ಲಿತ್ತೊ ಹೆಂಗೆ ಸುವ್ವಲಾಲಿ‖

ಇದು ಎಲ್ಲರೂ ನೋಡುತ್ತಿದಂತೆಯೇ ನಡೆದ ಪವಾಡ. ಜನಿವಾರ ಹರಿದು ಬಿಸುಟು ಶಿವಪ್ರಸಾದದ ಹೂ ಮಾಲೆ ಧರಿಸಿದ ಬಸವರಸರಿಗೆ ಮಂಗಳವಾಗಲಿ.

—

(ಪಕ್ಕದ ಪುಟ ದಿಂದ)

**ಸೃಷ್ಟಿ ನಿಯಮದ ರಹಸ್ಯ:**

ವಿಶ್ವದ ಯಾವುದೇ ಮೂಲೆಯಲ್ಲಿ ಆದೇನೇ ಘಟಿಸಲಿ, ಆದು ವಸಂತ ಋತುವಿನ ಗುಲಾಬಿ ಹೂವಿನಂತೆಯೂ, ಗ್ರೀಷ್ಮ ಋತುವಿನ ಪಕ್ವ ಫಲದಂತೆಯೂ, ಸರ್ವ ಸಾಧಾರಣವಾದ, ನಿಸರ್ಗಳವಾದ ಪ್ರಕೃತಿ ವ್ಯಾಪಾರದಲ್ಲುಂಟಾಗುವ ಒಂದು ಸಂಭವ. ಒಂದು ಕಾರಣವನ್ನು ಕಾರ್ಯವೊಂದು ಹಿಂಬಾಲಿಸಿಯೇ ಇರುತ್ತದೆ. ಪ್ರಪಂಚವೆಂಬುದು ಒಂದಕ್ಕೊಂದು ಸಂಬಂಧವಿಲ್ಲದ . ಸ್ವತಂತ್ರವಾದ ವಸ್ತು ವ್ಯಾಪಾರಗಳಿಂದೊಡಗೂಡಿದ ರಾಶಿ ಸಮೂಹವಲ್ಲ, ಇವುಗಳೆಲ್ಲಾ ಬುದ್ಧಿವಂತಿಕೆಯಿಂದ ಹೊಂದಿಸಿರುವ ಒಂದು ವಿಧವಾದ ಸಂಬಂಧ. ಒಂದು ಕ್ರಮ. ಸುವ್ಯವಸ್ಥೆ, ಸಮತೋಲನ ಉಂಟು. ಪಾರಂಪರ್ಯವಾದ ಘಟನೆಯೇ ಪ್ರಪಂಚದ ವಸ್ತುಗಳ ವಿಶೇಷಣವಲ್ಲ, ಆಶ್ಚರ್ಯ ಜನಕವಾದ ಸಮತಾಳ ಪರಸ್ಪರ ಹೊಂದಾಣಿಕೆ ಇದೇ ಮುಖ್ಯ ರಹಸ್ಯ.

**"ನನ್ನ ಪಾಲಿಗೆ ಬಂದದ್ದು:—**

ವಿಶ್ವವೆಂಬ ಜೀವಿಯ ಒಂದಂಗ ನಾನು ಆದ್ದ

ರಿಂದ ಸಮಗ್ರ ಪ್ರಪಂಚಕ್ಕೆ ಪ್ರಾಪ್ತವಾಗುವ ಅದೃಷ್ಟದಲ್ಲಿಯೇ ನನ್ನ ಪಾಲಿನದೂ ಸೇರಿ ಬಿಟ್ಟಿರುತ್ತದೆ. ಸಮಷ್ಟಿಗೇ ಶುಭಕರವಾದುದು ಯಥಾರ್ಥವಾಗಿ ಅದರ ಅವಯವವಾದ ವ್ಯಷ್ಟಿಗೆ ಎಂದೂ ಅಶುಭಕಾರಿಯಾಗಲಾರದಲ್ಲವೆ! ಇದಲ್ಲದೆ ನನ್ನ ಜಾತಿಗೇ ಸೇರಿ' ನನ್ನ ಸ್ವಭಾವವನ್ನೇ ಹೊಂದಿರುವ ಇತರ ಅವಯವಗಳಿಗೂ ನನಗೂ ಕೇವಲ ಸಮೀಪ ಬಾಂಧವ್ಯವಿರುವುದರಿಂದ ಸಮಾಜಕ್ಕೆ ಕೆಡುಕಾದುದೊಂದನ್ನು ನಾನು ಮಾಡದಂತೆ ಜಾಗರೂಕನಾಗಿರುವೆನು. ನನ್ನ ಆಲೋಚನೆ ಪ್ರಯತ್ನಗಳಲ್ಲೆಲ್ಲಾ ನನ್ನ ಬಂಧುಗಳಿಗೆ ಸಂಬಂಧಿಸಿದ ಸೂಚನೆಯೊಂದು ಇದ್ದೇ ಇರುವುದು, ಜನ ಸಾಮಾನ್ಯರ ಹಿತವೇ ನನ್ನ ಸಂಕಲ್ಪದ ಉದ್ದೇಶ ಮತ್ತು ಫಲ. ಅದಕ್ಕೆ ವಿರೋಧವಾದುದೆಲ್ಲವನ್ನೂ ನಿವಾರಿಸಲು ನನ್ನ ಸಾಮರ್ಥ್ಯವಿದ್ದಷ್ಟು ಪ್ರಯತ್ನಿಸುವೆನು. ಈ ತೆರನಾದ ಸ್ಥಿರ ನಿರ್ಧಾರಕ್ಕೆ ಬಂದ ಮೇಲೆ ನಿನ್ನ ಜೀವನ ಸೌಖ್ಯವಾಗುವುದರಲ್ಲಿ ಸಂದೇಹವಿಲ್ಲ.

## ನೋವಿನ ಮೂಲವೆಲ್ಲಿದೆ?

ಮನುಷ್ಯರಿಗೆ ನೋವು ತರುವವು ವಸ್ತುಗಳಲ್ಲ. ವಸ್ತುಗಳ ವಿಷಯವಾಗಿ ಅವರು ಹೊಂದಿರುವ ಭಾವನೆಗಳು. ಉದಾಹರಣೆಗೆ ಸಾವೆಂಬುದೇನೂ ಭಯಂಕರವಾದುದಲ್ಲ, ಹಾಗಿದ್ದರೆ ಸಾಕ್ರಟೀಸನಿಗೆ ಹಾಗೆಯೇ ಕಾಣುತಿತ್ತು. ಅದು ಭಯಂಕರವೆಂದು ನಾವು ಭಾವಿಸುತ್ತೇವಲ್ಲ ಆ ನಮ್ಮ ಭಾವನೆಯಿಂದಲೇ ನಮಗದರ ಹೆದರಿಕೆ. ಇದನ್ನು ಜ್ಞಾಪಕದಲ್ಲಿಟ್ಟುಕೊಂಡು ನಮಗೆ ತೊಂದರೆಯುಂಟಾದಾಗ, ವಿಘ್ನ ಒದಗಿದಾಗ ಅಥವಾ ನೋವು ಬಂದಾಗ, ಇತರರಿಂದ ನಮಗದು ಸಂಭವಿಸಿತೆಂದು ಎಂದೂ ಹೇಳದೆ, ನಮ್ಮಿಂದಲೇ ಅಂದರೆ ನಮ್ಮ ಭಾವನೆಗಳಿಂದಲೇ ಉಂಟಾದುದೆಂದು ತಿಳಿಯೋಣ. ಇತರರನ್ನು ನಿಂದಿಸುವವನು ಅಜ್ಞಾನಿ. ತನ್ನನ್ನೇ ಬೈದು ಕೊಳ್ಳುವವನು ಶುದ್ಧ ಅಜ್ಞಾನಿ. ಪೂರ್ಣಜ್ಞಾನಿಯಾದರೋ ಇತರರನ್ನು ದೂರುವುದಿಲ್ಲ, ತನ್ನನ್ನೂ ನಿಂದಿಸಿಕೊಳ್ಳುವುದಿಲ್ಲ.

## ಆರಿಸಬೇಕಾದುದು ಯಾವುದು? ಈ ಎರಡರಲ್ಲಿ:

ಪ್ರತಿಯೊಂದು ವಸ್ತು ವ್ಯಾಪಾರಕ್ಕೆ ಎರಡು ಒಂದನ್ನು ಹಿಡಿಗಳಿರುವುವು. ಹಿಡಿದರೆ ಹಿಸಬಹುದು, ಮತ್ತೊಂದನ್ನು ಹಿಡಿದರೆ ಸಹಿಲಶಕ್ಯವಾಗುವುದು. ನಿನ್ನ ಸಹೋದರರು ನಿನಗೆ ಅನ್ಯಾಯ ಮಾಡಿದರೆ, ಅವನು ಅನ್ಯಾಯ ಮಾಡಿದನೆಂಬ ತುದಿಯನ್ನು ಹಿಡಿದುಕೊಂಡರೆ ಅವನ ವರ್ತನವನ್ನು ಸಹಿಸಲಸಾಧ್ಯವಾಗುವುದು, ಅದಕ್ಕೆ ಬದಲಾಗಿ, ಅವನು ನಿನ್ನ ಸಹೋದರನು ನಿನ್ನ ನಿನ್ನ ಜೊತೆಯಲ್ಲಿ ಹುಟ್ಟಿ ಬೆಳೆದವನು ಎಂಬ ತುದಿಯನ್ನು ಹಿಡಿದುಕೊಂಡರೆ ಆಗ ಅದನ್ನು ಸಹಿಸಬಹುದಾದರೀತಿ ಹಿಡಿದಂತಾಗುವುದು.

## ವಿಶ್ವನಾಟಕ ಸೂತ್ರಧಾರಿ:—

ಅಪಾರವಾದ ಕಾಲವಾಹಿನಿಯ ಎಷ್ಟೊಂದು ಅತ್ಯಲ್ಪ ಭಾಗ ಪ್ರತಿಯೊಬ್ಬ ಮಾನವನಪಾಲಿಗೆ ಬಂದಿರುತ್ತದೆ; ಅದೆಷ್ಟು ಜಾಗ್ರತೆಯಾಗಿ ಯುಗವಾಹಿನಿಯಲ್ಲಿ ಸೇರಿ ಅದೃಶ್ಯವಾಗಿ ಹೋಗುವುದು! ಈ ವಿಶ್ವದ ಮೂಲ ವಸ್ತುವಿನ ಮತ್ತು ಲೋಕಾತ್ಮನ ಎಷ್ಟೊಂದು ಅತ್ಯಲ್ಪ ಭಾಗ ಪ್ರತಿಯೊಬ್ಬ ಮಾನವನಿಗೂ ಹಂಚಲ್ಪಟ್ಟಿದೆ! ಅಯೋ ಮರುಳೆ, ಪೃಥ್ವಿಎಂಬ ಎಷ್ಟು ಸಣ್ಣ ಹೆಂಟೆಯ ಮೇಲೆ ನೀನು ಹರಿದಾಡುತ್ತಿರುವೆ, ಇದೆಲ್ಲವನ್ನೂ ಸಾವಧಾನವಾಗಿ ಆಲೋಚಿಸಿ, ನಿನ್ನ ಸ್ವಭಾವವನ್ನು ವಿಶ್ವಧರ್ಮಕ್ಕನುಸಾರವಾಗಿ ಹೊಂದಿಸಿಕೊಳ್ಳುವುದನ್ನು ಕಲಿಯ ಬಾರದೆ?-- ಇದಕ್ಕಿಂತಲೂ ಹೆಚ್ಚಿನದು ಈ ಪ್ರಪಂಚದಲ್ಲಿ ಯಾವುದೂ ಇಲ್ಲವೆಂದು ತಿಳಿ.

ಸಾವು. ಇದೊಂದು ಅಜ್ಞಾನದಿಂದ ಹುಟ್ಟಿ ಮನುಷ್ಯನನ್ನು ಭಯ ಭೀತನನ್ನಾಗಿ ಮಾಡಿರುವ ಭಾವನೆ ಮಾತ್ರ. ಇದರ ಬಗ್ಗೆ ನಿಶ್ಚಿಂತನಾಗಿರುವಂತೆ ಒಬ್ಬನನ್ನು ಹುರಿದುಂಬಿಸಲು ಇತರ ವಿಚಾರಗಳೊಂದಿಗೆ ಬಲವಾದ, ಈ ಅಂಶವನ್ನು ಪರಾಮರ್ಶಿಸುವಂತೆ ಹೇಳಬೇಕು, ವಿಶ್ವಾತ್ಮನ ಇಚ್ಛೆ ಆವಶ್ಯಕತೆಗನುಸಾರವಾಗಿ ಲೋಕದ ಘಟನೆಗಳು ಸಂಭವಿಸುವುವೆಂದೂ, ಸಾವೆಂಬುದೂ ಅಂತಹ ಒಂದು ಅನಿವಾರ್ಯ ಘಟನೆಯೆಂದೂ ಅರಿತಿರುವ ಜ್ಞಾನಿಗೆ ಸಾವು ಘೋರವಾಗಿ ಕಾಣುವುದೇ..? ಜೀವನ ಹೆಚ್ಚೇ ಇರಲಿ ಒಳ್ಳೆಯದಾದ್ದರೆ ಸರಿ. ಪ್ರಪಂಚದ ವಸ್ತುಗಳು ಪರಿಣಾಮಹೊಂದದ ಬಹು ಕಾಲ ನಿಲ್ಲಲಿ, ಕೊಂಚಕಾಲನಿಲ್ಲಲಿ- ಎಲ್ಲವೂ ಒಂದೇ ಎಂದು ಉಪೇಕ್ಷೆ ಮಾಡಿದವನಿಗೆ ಸಾವಿನ ಅಂಜಿಕೆ ಇನ್ನೆಲ್ಲಿ? ಎಲಾಮಾನವಾ: ಪ್ರಪಂಚವೆಂಬ ಈಶ್ವರನ ಪ್ರೇಮನಗರದಲ್ಲಿ ನೀನು ನಾಗರೀಕನಾಗಿ ಬದುಕಿ ಬಾಳಿದ್ದೀಯೆ- ವರುಷಗಳ ಲೆಕ್ಕ ಕಟ್ಟಿಕೊಂಡು ನಿನಗೇನು? ನಗರದ ಕಾನೂನು ನಿಯಮ

## ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ಅವಗಾಹನೆಗೆ

ಶ್ರೀ ಕ್ಷೇತ್ರದಲ್ಲಿ ದಿನಾಂಕ 14-10-1978 ರಲ್ಲಿ ಸಮಾವೇಶಗೊಂಡಿದ್ದ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ಸಂಘದ 24 ನೆಯ ಮಹಾಧಿವೇಶನದ ಸರ್ವ ಸದಸ್ಯರ ಸಭೆಯು ಮುಂದಿನ ವರ್ಷ ತನ್ನ ಸಂಘದ "ರಜತ" ಮಹೋತ್ಸವನ್ನು ಆಚರಿಸಬೇಕೆಂದು ತೀರ್ಮಾನಿಸಿತು.

ಇದೇ ಸುಸಂದರ್ಭದಲ್ಲಿ, ಶ್ರೀ ಕ್ಷೇತ್ರಾಧ್ಯಕ್ಷರಾದ ಶ್ರೀ ಮ. ಪ್ರ. ಸ್ವರೂಪಿ ಡಾ|| ಶ್ರೀ ಶಿವಕುಮಾರಸ್ವಾಮಿಗಳವರು ಶ್ರೀ ಉದ್ದಾನಶಿವಯೋಗೀಶ್ವರರ ಕರಕಂಜ (ಕಮಲ) ಸಂಜಾತರಾಗಿ 1930 ನೆಯಇಸ್ವಿ ಯಲ್ಲಿ ಪಟ್ಟಾಧಿಕಾರಿಗಳಾಗಿ ಅಂದಿನಿಂದ ಇಂದಿನವರೆವಿಗೂ "ಅವಿಶ್ರಾಂತವಾಗಿ "ಮಾನವ ಸೇವೆಯೇ ಮಹಾದೇವನ" ಸೇವೆಯೆಂದು ದುಡಿಯುತ್ತಲಿರುವ ಪೂಜ್ಯರಿಗೆ 1980 ನೆಯ ಇಸ್ವಿಗೆ 50 ವರ್ಷಗಳು ತುಂಬುತ್ತವೆಂಬುದು ಹರ್ಷದಾಯಕವಾಗಿರುತ್ತದೆ. ಇದೇ ನಮ್ಮ ಸಂಘದ ಬೆಳ್ಳಿಹಬ್ಬದ ಕಾಲದಲ್ಲಿಯೇ ನಮ್ಮ ಹಳೆಯ ವಿದಾರ್ಥಿ ಸಂಘವು ಶ್ರೀಯವರಿಗೆ ಒಂದು ಅತ್ಯಮೂಲ್ಯವಾದ "ಸಿದ್ಧಗಂಗಾಶ್ರೀ" ಎಂಬ ಹೆಸರಿನ ಬೃಹದಭಿನಂದನಾ ಗ್ರಂಥವನ್ನು ಕಾಣಿಕೆಯ ರೂಪವಾಗಿ ಸಮರ್ಪಿಸಬೇಕೆಂತಲೂ ಗ್ರಂಥಕ್ಕಾಗಬಹುದಾದ ಬೃಹತ್ ನಿಧಿಯನ್ನು ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳಿಂದ ಸಂಗ್ರಹಿಸಬೇಕೆಂತಲೂ ಹಳೆಯ ವಿದ್ಯಾರ್ಥಿಗಳು ಭಾರತದ ಎಲ್ಲೆಡೆಯಲ್ಲಿದ್ದರೂ ಸರಿಯೇ ಅವರುಗಳು ತಮ್ಮ ಮಾಹೆಯ ಉತ್ಪನ್ನದ ಅರ್ಧಾಂಶವನ್ನು ಈ ಮಹತ್ಕಾರ್ಯಕ್ಕೆ ಕಾಣಿಕೆಯ ರೂಪದಲ್ಲಿ ಸಲ್ಲಿಸುವುದೆಂತಲೂ ನಿರ್ಣಯಿಸಿರುತ್ತದೆ.

ಕಾರ್ಯದರ್ಶಿಗಳು
ಹಳೆಯ ವಿದ್ಯಾರ್ಥಿ ಸಂಘ
ಶ್ರೀ ಸಿದ್ಧಗಂಗಾ ಕ್ಷೇತ್ರ.

"SIDDAGANGA" Monthly, Sree Siddaganga Mutt. KRN Q
Registered with the Registrar of News papers for India under No. 17139/



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.